# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಬುಧವಾರ, ಅಕ್ಟೋಬರ್ ೧, ೨೦೧೪ (ಆಶ್ವಯುಜ ೯, ಶಕ ವರ್ಷ ೧೯೩೬) | ನಂ. ೬೨೩ |
|---|---|---|
| Part– I | Bangalore, Wednesday, October 1, 2014 (Aashwayuja 9, Shaka Varsha 1936) | No. 623 |


### ಕರ್ನಾಟಕ ಸರ್ಕಾರದ ನಡವಳಿಗಳು

### ಸಹಕಾರ ಸಚಿವಾಲಯ

**ವಿಷಯ :** 2014–15ನೇ ಸಾಲಿನಿಂದ **ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ** ಸದಸ್ಯರ ನೋಂದಾವಣೆ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್ಎಸ್ 2014, ದಿನಾಂಕ: 26.02.2014, 30.05.2014, 16.07.2014 ಮತ್ತು 19.08.2014

**ಪ್ರಸ್ತಾವನೆ:**

2014–15ನೇ ಸಾಲಿನಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ದಿನಾಂಕ:20.09.2014ರವರೆಗಿನ ನೋಂದಾವಣೆ ಪ್ರಗತಿಯನ್ನು ಅವಲೋಕಿಸಿದಾಗ 29,86,799 ಸದಸ್ಯರು ಮಾತ್ರ ಯೋಜನೆಯಡಿಯಲ್ಲಿ ನೋಂದಾವಣೆಯಾಗಿದ್ದು, ಇದು ಹಿಂದಿನ ವರ್ಷ 2013–14ನೇ ಸಾಲಿನ ಸದಸ್ಯರ ನೋಂದಾವಣೆಗೆ ಹೋಲಿಸಿದರೆ ಶೇ.79.60ರಷ್ಟು ಮಾತ್ರ ಸಾಧನೆಯಾಗಿರುತ್ತದೆ. ದಿನಾಂಕ:22.09.2014ರಂದು ಜರುಗಿದ ರಾಜ್ಯಮಟ್ಟದ ಪ್ರಗತಿ ಪರಿಶೀಲನಾ ಸಭೆಯಲ್ಲಿ ಮಾನ್ಯ ಸಹಕಾರ ಸಚಿವರು ಈ ಯೋಜನೆಯಲ್ಲಿನ ನೋಂದಾವಣೆ ಪ್ರಗತಿ, ಹಿಂದಿನ ಸಾಲಿನ ಪ್ರಗತಿಯ ಪ್ರಮಾಣವನ್ನು ತಲುಪದೇ ಇರುವುದರಿಂದ ಯೋಜನೆಯಲ್ಲಿ ನೋಂದಾವಣೆ ಅವಧಿಯನ್ನು ಇನ್ನು ಒಂದು ತಿಂಗಳು ಕಾಲ ವಿಸ್ತರಿಸಲು ಸೂಚಿಸಿರುತ್ತಾರೆ. ಪ್ರಸ್ತುತ ಈ ಯೋಜನೆಯ ಅವಧಿ ದಿನಾಂಕ:30.09.2014ಕ್ಕೆ ಮುಕ್ತಾಯವಾಗಲಿರುವುದರಿಂದ ದಿನಾಂಕ:31.10.2014ರವರೆಗೆ ವಿಸ್ತರಿಸಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/101/ಸಿಎಲ್ಎಸ್/2014, ಬೆಂಗಳೂರು ದಿನಾಂಕ: 01.10.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್ಎಸ್ 2014, ದಿನಾಂಕ:26.02.2014ರ ಆದೇಶದಲ್ಲಿನ ಮಾರ್ಗಸೂಚಿ ಸಂಖ್ಯೆ 14(ಆ) ಅನ್ನು ಈ ಕೆಳಕಂಡಂತೆ ಬದಲಾಯಿಸಿ ಆದೇಶ ಹೊರಡಿಸಿದೆ.

**ಬದಲಾದ ಮಾರ್ಗಸೂಚಿ: 14(ಆ)**

ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ/ ನವೀಕರಿಸುವ **ಕೊನೆಯ ದಿನಾಂಕ: 31.10.2014**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– I | ಬೆಂಗಳೂರು, ಬುಧವಾರ, ಅಕ್ಟೋಬರ್ ೧, ೨೦೧೪ (ಆಶ್ವಯುಜ ೯, ಶಕ ವರ್ಷ ೧೯೩೬) | ನಂ. ೬೨೪ |
| Part– I | Bangalore, Wednesday, October 1, 2014 (Aashwayuja 9, Shaka Varsha 1936) | No. 624 |


**ಕರ್ನಾಟಕ ಸರ್ಕಾರದ ನಡವಳಿಗಳು**

**ಸಹಕಾರ ಸಚಿವಾಲಯ**

**ವಿಷಯ :** 2014–15ನೇ ಸಾಲಿನಿಂದ **ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ** ಸದಸ್ಯರ ನೋಂದಾವಣೆ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್ಎಸ್ 2014, ದಿನಾಂಕ: 26.02.2014, 30.05.2014, 16.07.2014 ಮತ್ತು 19.08.2014

**ಪ್ರಸ್ತಾವನೆ:**

2014–15ನೇ ಸಾಲಿನಲ್ಲಿ ನಗರ ಯಶಸ್ವಿನಿ ಯೋಜನೆಯಡಿಯಲ್ಲಿ ದಿನಾಂಕ:20.09.2014 ರವರೆಗಿನ ಸದಸ್ಯರ ನೋಂದಾವಣೆ ಪ್ರಗತಿಯನ್ನು ಅವಲೋಕಿಸಲಾಗಿ ಈ ಯೋಜನೆಯಲ್ಲಿ ಇದುವರೆಗೆ 1,19,068 ಸದಸ್ಯರು ಮಾತ್ರ ನೋಂದಾವಣೆಯಾಗಿದ್ದು, ಗುರಿಗೆ ಹೋಲಿಸಿದರೆ ನೋಂದಾವಣೆಯ ಪ್ರಗತಿಯು ಅತ್ಯಂತ ನಿರಾಶದಾಯಕವಾಗಿರುತ್ತದೆ.

ದಿನಾಂಕ:22.09.2014ರಂದು ಜರುಗಿದ ರಾಜ್ಯ ಮಟ್ಟದ ಪ್ರಗತಿ ಪರಿಶೀಲನಾ ಸಭೆಯಲ್ಲಿ ನಗರ ಯಶಸ್ವಿನಿ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆಯ ಪ್ರಗತಿಯನ್ನು ಅವಲೋಕಿಸಿದ ಮಾನ್ಯ ಸಹಕಾರ ಸಚಿವರು ಪ್ರಗತಿಯು ತೀರಾ ಕಡಿಮೆ ಇರುವುದನ್ನು ಮನಗಂಡು, ನಗರ ಯಶಸ್ವಿನಿ ಯೋಜನೆಯು ಈ ವರ್ಷ ಪ್ರಾರಂಭಿಸಿರುವುದರಿಂದ ಕನಿಷ್ಠ 10.00 ಲಕ್ಷ ಸದಸ್ಯರನ್ನಾದರೂ ಯೋಜನೆಯಡಿಯಲ್ಲಿ ನೋಂದಾಯಿಸಲು ಸಹಕಾರ ಇಲಾಖೆಯ ಅಧಿಕಾರಿಗಳು ಸೂಕ್ತ ಕ್ರಮಕೈಗೊಳ್ಳುವಂತೆ ತಿಳಿಸಿ ನೋಂದಾವಣೆ ಅವಧಿಯನ್ನು ಒಂದು ತಿಂಗಳುಗಳ ಕಾಲ ವಿಸ್ತರಿಸುವಂತೆ ಸೂಚಿಸಿರುತ್ತಾರೆ.

ಪ್ರಸ್ತುತ ಈ ಯೋಜನೆಯ ಅವಧಿ ದಿನಾಂಕ:30.09.2014ಕ್ಕೆ ಮುಕ್ತಾಯವಾಗಲಿರುವುದರಿಂದ ಇಲ್ಲಿಯವರೆಗಿನ ಸದಸ್ಯರ ನೋಂದಾವಣೆ ಕಡಿಮೆಯಿರುವುದರಿಂದ ಮಾನ್ಯ ಸಹಕಾರ ಸಚಿವರ ಸೂಚನೆಯಂತೆ ಹೆಚ್ಚಿನ ಪ್ರಗತಿ ಸಾಧಿಸಲು ಅನುವಾಗುವಂತೆ ಸದಸ್ಯರ ನೋಂದಾವಣೆ ದಿನಾಂಕವನ್ನು ದಿ:31.10.2014ರವರೆಗೆ ವಿಸ್ತರಿಸಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/119/ಸಿಎಲ್ಎಸ್/2014, ಬೆಂಗಳೂರು ದಿನಾಂಕ:01.10.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಸಿಒ 119 ಸಿಎಲ್ಎಸ್ 2014, ದಿನಾಂಕ:26.02.2014ರ ಆದೇಶದಲ್ಲಿನ ಮಾರ್ಗಸೂಚಿ ಸಂಖ್ಯೆ 13(ಅ)ನ್ನು ಈ ಕೆಳಕಂಡಂತೆ ಬದಲಾಯಿಸಿ ಆದೇಶ ಹೊರಡಿಸಲಾಗಿದೆ.

**ಬದಲಾದ ಮಾರ್ಗಸೂಚಿ 13(ಅ)**

ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ **ಕೊನೆಯ ದಿನಾಂಕ:31.10.2014**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– I | ಬೆಂಗಳೂರು, ಬುಧವಾರ, ಅಕ್ಟೋಬರ್ ೧೫, ೨೦೧೪ (ಆಶ್ವಯುಜ ೨೩, ಶಕ ವರ್ಷ ೧೯೩೬) | ನಂ. ೬೪೨ |
| Part– I | Bangalore, Wednesday, October 15, 2014 (Aashwayuja 23, Shaka Varsha 1936) | No. 642 |

**ಅಲ್ಪಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಸಚಿವಾಲಯ**

**ಸುತ್ತೋಲೆ**

No. MWD 187 WES 2014, **ಬೆಂಗಳೂರು, ದಿನಾಂಕ: 14–10–2014**

**ವಿಷಯ:** ಕರ್ನಾಟಕ ರಾಜ್ಯದ ವಕ್ಫ್ ಆಸ್ತಿಗಳ 2ನೇ ಸರ್ವೆಕಾರ್ಯ ಪೂರ್ಣಗೊಳಿಸುವ ಕುರಿತು.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್.ಡಿ/57/ಡಬ್ಲ್ಯೂ.ಇ.ಎಸ್/97, ದಿನಾಂಕ: 18–08–1997.

2.ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್.ಡಿ/73/ಡಬ್ಲ್ಯೂ.ಇ.ಎಸ್/2000 (P) ದಿನಾಂಕ: 29–01–2003.

3.ಪತ್ರ ಸಂಖ್ಯೆ: ಕ.ರಾ.ವ.ಮಂ/2ನೇ ಸರ್ವೆ/ಒ.ಎಸ್.ಎಮ್/03/ 13–14, ದಿನಾಂಕ: 15–09–2014, ಮುಖ್ಯಕಾರ್ಯನಿರ್ವಹಣಾಧಿಕಾರಿಗಳು, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ.

ಉಲ್ಲೇಖ–1ರ ಅಧಿಸೂಚನೆಯಲ್ಲಿ ಕಂದಾಯ ಇಲಾಖೆ (ವಕ್ಫ್) ಅಧಿಸೂಚನೆಯನ್ನು ಹೊರಡಿಸಿ ಸರ್ವೆ ಆಯುಕ್ತರು, ಹೆಚ್ಚುವರಿ ಸರ್ವೆ ಆಯುಕ್ತರು ಮತ್ತು ಸಹಾಯಕ ಸರ್ವೆ ಆಯುಕ್ತರು (ವಕ್ಫ್) ಎಂಬುದಾಗಿ ರಾಜ್ಯದ ವಿವಿಧ ಪ್ರದೇಶಗಳಿಗೆ ರಾಜ್ಯದಲ್ಲಿರುವ ವಕ್ಫ್ ಆಸ್ತಿಗಳ 2ನೇ ಸರ್ವೆಕಾರ್ಯ ಪೂರ್ಣಗೊಳಿಸಲು ನೇಮಕಾತಿ ಮಾಡಲಾಗಿರುತ್ತದೆ. ತದನಂತರ ಈ ಕಾರ್ಯವು ಸಮರ್ಪಕವಾಗಿ ಕೈಗೊಳ್ಳಲು ಕೂಲಂಕುಶವಾದ ಮಾರ್ಗಸೂಚಿಯನ್ನು ಮೇಲೆ ಉಲ್ಲೇಖಿಸಿರುವ ಸುತ್ತೋಲೆ–2ರಲ್ಲಿ ನೀಡಲಾಗಿರುತ್ತದೆ.

ಈ ಕಾರ್ಯದಲ್ಲಿ ಆಗಿರುವ ಪ್ರಗತಿಯನ್ನು ವಿಭಾಗಾಧಿಕಾರಿಗಳು, ಜಿಲ್ಲಾಧಿಕಾರಿಗಳು ಮತ್ತು ಮುಖ್ಯಕಾರ್ಯನಿರ್ವಹಣಾಧಿಕಾರಿಗಳು ಜಿಲ್ಲಾ ಪಂಚಾಯ್ತಿ ಸಮಾವೇಶದಲ್ಲಿ ಹಾಗೂ ಕಾಲಕಾಲಕ್ಕೆ ಪರಿಶೀಲಿಸಲಾಗಿದೆ, ಜಿಲ್ಲಾ ಮಟ್ಟದ ವಕ್ಫ್ ಕಾರ್ಯಪಡೆಯ ಅಧ್ಯಕ್ಷರಿಗೆ ಅಗತ್ಯ ಅನುದಾನವನ್ನು ಒದಗಿಸಿ ಪ್ರತಿ ಜಿಲ್ಲೆಯಲ್ಲಿ ಈ ಕಾರ್ಯ ಪರಿಣಾಮಕಾರಿಯಾಗಿ ನಿರ್ವಹಿಸಲು ಬಾಡಿಗೆ ಆಧಾರದಮೇಲೆ ವಾಹನವನ್ನು ಪಡೆಯುವ ಅವಕಾಶವನ್ನು ಸಹ ಕಲ್ಪಿಸಲಾಗಿರುತ್ತದೆ. ಮಾನ್ಯ ಅಲ್ಪಸಂಖ್ಯಾತರ ಕಲ್ಯಾಣ ಹಾಗೂ ವಕ್ಫ್ ಸಚಿವರು ವಕ್ಫ್ ಆಸ್ತಿಗಳ 2ನೇ ಸರ್ವೆಕಾರ್ಯ ಮಾರ್ಚ್ 2014ರ ಒಳಗಾಗಿ ಪೂರ್ಣಗೊಳಿಸಲಾಗುವುದೆಂದು ವಿಧಾನ ಮಂಡಲದ ಉಭಯ ಸದನಗಳಲ್ಲಿ ಆಶ್ವಾಸನೆ ನೀಡಿರುತ್ತಾರೆ.

ಈ ಕಾರ್ಯದ ಪ್ರಗತಿಯನ್ನು ಪರಿಶೀಲಿಸಲಾಗಿ ರಾಜ್ಯದಲ್ಲಿ ಕೊಡಗು ಜಿಲ್ಲೆಯಲ್ಲಿ ಸರ್ವೆಕಾರ್ಯವನ್ನು ಮುಗಿಸಿ ರಾಜ್ಯಪತ್ರದಲ್ಲಿ ಪ್ರಕಟಣೆಯಾಗಿದ್ದು ಉಳಿದ ಎಲ್ಲಾ ಜಿಲ್ಲೆಗಳಲ್ಲಿ ಈ ಕಾರ್ಯ ಅಪೂರ್ಣವಾಗಿರುತ್ತದೆ. ಈ ಕಾರ್ಯದಲ್ಲಿ ಆಗಿರುವ ವಿಳಂಬದ ಕಾರಣ ವಕ್ಫ್ ಆಸ್ತಿಗಳ ಖಾತೆ ಇಂದೀಕರಣ ಮತ್ತು ವಕ್ಫ್ ಆಸ್ತಿಗಳ ಸಂರಕ್ಷಣೆ ಕಾರ್ಯ ಕುಂಠಿತಗೊಂಡಿರುತ್ತದೆ. ಇದಕ್ಕೆ ಸಂಬಂಧಿಸಿದ ಅಧಿಕಾರಿಗಳ ವೈಫಲ್ಯವೇ ಕಾರಣ ಎಂಬುದು ವ್ಯಕ್ತವಾಗುತ್ತದೆ. ಸರ್ಕಾರವು ಈ ವಿಷಯವನ್ನು ಅತೀ ಗಂಭೀರವಾಗಿ ಪರಿಗಣಿಸಿರುತ್ತದೆ 2013ರ ವಕ್ಫ್ ತಿದ್ದುಪಡಿ ಕಾಯ್ದೆ ದಿನಾಂಕ: 01–11–2013 ರಿಂದ ಜಾರಿಗೆ ಬಂದಿರುತ್ತದೆ ಇದರ ಕಲಂ 4 ಸಬ್ ಕಲಂ (6) (ii) ಕೆಳಕಂಡಂತಿದೆ "The Waqf properties

already Notified shall not be reviewed again in subsequent survey except where the status of such properties has been changed in accordance with the provision of any law"

ವಕ್ಫ್ ಮಂಡಳಿಯ 2ನೇ ಸರ್ವೆಕಾರ್ಯ ಈ ಪ್ರವದಾನಗಳ ಪ್ರಕಾರವೇ ಮಾಡಬೇಕಾಗಿರುತ್ತದೆ. ಆದುದ್ದರಿಂದ ಈ ಕೆಳಕಂಡ ಮಾರ್ಗಸೂಚಿಯನ್ನು ಪುನರುಚ್ಚರಿಸಲಾಗಿದೆ.

1. ಕರ್ನಾಟಕ ವಕ್ಫ್ ನಿಯಮ 1997ರಲ್ಲಿ ನಿಗಧಿಪಡಿಸಲಾಗಿರುವ ನಮೂನೆ–1ರಲ್ಲಿ ಮಾಹಿತಿಯನ್ನು ಸಲ್ಲಿಸಿರುವುದಕ್ಕೆ ಸಂಬಂಧಿಸಿದ ತಹಸೀಲ್ದಾರರು ಅವಶ್ಯವೆನಿಸಿದ್ದಲ್ಲಿ ಷರಾ ಬರೆದು ಅವರ ಹೆಸರು ಮತ್ತು ಮೊಹರಿನೊಂದಿಗೆ ಸಹಿಮಾಡಿ ದೃಢೀಕರಿಸತಕ್ಕದ್ದು ಈ ನಮೂನೆಯನ್ನು ಉಪವಿಭಾಗದ ಸಹಾಯಕ ಆಯುಕ್ತರು ಮೇಲುಸಹಿ ಮಾಡತಕ್ಕದ್ದು.

2. ಬೆಂಗಳೂರು ಮಹಾ ನಗರ ಪಾಲಿಕೆ ಮತ್ತು ಅದರ ಅಡಿಯಲ್ಲಿ ಬರುವ 6 ನಗರಸಭೆಗಳ ಹೆಚ್ಚುವರಿ ಹಾಗೂ ಜಂಟಿ ಆಯುಕ್ತರುಗಳು, ಹೆಚ್ಚುವರಿ ಸರ್ವೆ ಆಯುಕ್ತರು ನಮೂನೆ–1ಕ್ಕೆ ಮೇಲುಸಹಿ ಮಾಡತಕ್ಕದ್ದು.

3. ಕರ್ನಾಟಕ ಭೂ ಕಂದಾಯ ನಿಯಮ 1965 ನಿಯಮ (72 & 139)ರ ಅನ್ವಯ ಈ ಸರ್ವೆ ಕಾರ್ಯ ಕೈಗೊಳ್ಳುವುದು. ನಮೂನೆ–1ರೊಂದಿಗೆ ಪ್ರತಿ ವಕ್ಫ್ ಆಸ್ತಿಗೆ ಪ್ಲೇನ್ ಟೇಬಲ್ ಶೀಟ್, ನಕ್ಷೆ ಮತ್ತು ಪಹಣಿ ಹಾಗೂ ಇತರೆ ಸಂಬಂಧಿಸಿದ ದಾಖಲಾತಿಗಳನ್ನು ಲಗತ್ತಿಸುವುದು.

4. ನಮೂನೆ–1ನ್ನು ತ್ರಿ ಪ್ರತಿಗಳಲ್ಲಿ ತಯಾರಿಸಿ, ಒಂದು ಸರ್ಕಾರಕ್ಕೆ, ಎರಡನೇ ಪ್ರತಿ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಗೆ ಕಳುಹಿಸಿ, ಮೂರನೇ ಪ್ರತಿ ಸರ್ವೆ ಮತ್ತು ಭೂ ದಾಖಲೆಗಳ ಕಛೇರಿಯಲ್ಲಿ ನಿರ್ವಹಿಸುವುದು.

5. ರಾಜ್ಯದ ಎಲ್ಲಾ ಉಪವಿಭಾಗಾಧಿಕಾರಿಗಳು ವಕ್ಫ್ ಕಾಯಿದೆ 1995ರ ಕಲಂ 4(4)ರಲ್ಲಿ ಪ್ರದತ್ತವಾಗಿರುವ ಸರ್ವೆ ಆಯುಕ್ತರ ಅಧಿಕಾರ ನಿರ್ವಹಿಸುವವರು.

6. ಪರಿಶೀಲನೆ ಹಾಗೂ ಪ್ರಕಟಣೆಗಾಗಿ ವಕ್ಫ್ ಆಸ್ತಿಯ ಪಟ್ಟಿ ಹಾಗೂ ವರದಿಯನ್ನು ತಾಲ್ಲೂಕುವಾರು ರಾಜ್ಯಪತ್ರದಲ್ಲಿ ಪ್ರಕಟಿಸಬೇಕಾಗಿರುತ್ತದೆ. ಆದುದ್ದರಿಂದ ಸಂಪೂರ್ಣ ತಾಲ್ಲೂಕಿನ ವರದಿಯನ್ನು ದಾಖಲಾತಿ ಸಮೇತ ಜಿಲ್ಲೆಯ ಹೆಚ್ಚುವರಿ ಸರ್ವೆ ಆಯುಕ್ತರು ಕಾರ್ಯದರ್ಶಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಸಲ್ಲಿಸತಕ್ಕದ್ದು ಅದರ ಪ್ರತಿಯನ್ನು ಕಾರ್ಯದರ್ಶಿ ಕಂದಾಯ ಇಲಾಖೆಗೂ ಸಹ ಸಲ್ಲಿಸುವುದು.

ತಿದ್ದುಪಡಿ ವಕ್ಫ್ ಕಾಯ್ದೆ ಕಲಂ 4(1) 1(A)ರ ಅನುಸಾರ ರಾಜ್ಯ ಸರ್ಕಾರವು ವಕ್ಫ್ ಆಸ್ತಿಗಳ ಪಟ್ಟಿಯನ್ನು ನಿರ್ವಹಿಸಿ ಸರ್ವೆ ಆಗದೇ ಇರುವ ಆಸ್ತಿಗಳ ಸರ್ವೆಕಾರ್ಯವನ್ನು ಈ ಕಾಯ್ದೆ ಜಾರಿಗೆ ಬಂದ ಒಂದು ವರ್ಷದ ಅವಧಿಯ ಒಳಗಡೆ ಪೂರ್ಣಗೊಳಿಸತಕ್ಕದ್ದೆಂದಿದೆ. ಈ ಕಾನೂನಾತ್ಮಕ ಅವಧಿಯು 31–10–2014ಕ್ಕೆ ಮುಕ್ತಾಯವಾಗುತ್ತದೆ. ಆದುದರಿಂದ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು ವಕ್ಫ್ ಆಸ್ತಿಗಳ 2ನೇ ಸರ್ವೆಕಾರ್ಯವನ್ನು ದಿನಾಂಕ: 31–10–2014ರ ಒಳಗಾಗಿ ಕಡ್ಡಾಯವಾಗಿ ಪೂರ್ಣಗೊಳಿಸಿಲು ಹೊಣೆಗಾರರಾಗಿರುತ್ತಾರೆಂದು ಸೂಚಿಸಲಾಗಿದೆ.

**ಎಂ. ನಾಗರತ್ನ**
ಸರ್ಕಾರದ ಉಪ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಗುರುವಾರ, ಅಕ್ಟೋಬರ್ ೧೬, ೨೦೧೪ (ಆಶ್ವಯುಜ ೨೪, ಶಕ ವರ್ಷ ೧೯೩೬) | ನಂ. ೬೪೪ |
|---|---|---|
| **Part– I** | **Bangalore, Thursday, October 16, 2014 (Aashwayuja 24, Shaka Varsha 1936)** | **No. 644** |


**ಕರ್ನಾಟಕ ವಿಧಾನ ಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಸಸ/ಆ–1/02/ಹೈ.ಕ.ಪ್ರ.ಗು.ಹು./2014, ಬೆಂಗಳೂರು, ದಿನಾಂಕ: 15–10–2014**

ವಿಷಯ: ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರಡಿಯಲ್ಲಿ ಕರ್ನಾಟಕ ವಿಧಾನಸಭೆ ಸಚಿವಾಲಯದಲ್ಲಿನ ವಿವಿಧ ವೃಂದಗಳಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದವರಿಗಾಗಿ ಶೇ.8 ರಷ್ಟು ಹುದ್ದೆಗಳನ್ನು ಗುರುತಿಸುವ ಕುರಿತು.

ಉಲ್ಲೇಖ: 1. ಅಧಿಸೂಚನೆ ಸಂಖ್ಯೆ: ಸಿಆಸುಇ/06/ಪಿ.ಎಲ್.ಎಕ್ಸ್/2012, ದಿನಾಂಕ:6.11.2013.

2. ಈ ಸಚಿವಾಲಯದ ಅಧಿಸೂಚನೆ ಸಂಖ್ಯೆ: ಕವಿಸಸ/ಆ-1/02/ಹೈ.ಕ.ಪ್ರ.ಗು.ಹು./2014, ದಿನಾಂಕ: 16.01.2014.

ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ)ಯ ತಿದ್ದುಪಡಿಯ ರೀತ್ಯಾ ಕರ್ನಾಟಕ ರಾಜ್ಯದ ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ಸೇರಿದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಗಳ ವಿಶೇಷ ಅಭಿವೃದ್ಧಿ ಮತ್ತು ಆ ಪ್ರದೇಶದ ಜನರಿಗೆ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಮೀಸಲಾತಿಗಳನ್ನು ಒದಗಿಸಲು ಉದ್ದೇಶಿಸಲಾಗಿರುತ್ತದೆ.

ಅದರಂತೆ, ಮೇಲೆ ತಿಳಿಸಿರುವ ಉದ್ದೇಶಗಳನ್ನು ಅನುಷ್ಠಾನಕ್ಕೆ ತರುವ ಸಂಬಂಧ ಕರ್ನಾಟಕದ ಘನತೆವೆತ್ತ ರಾಜ್ಯಪಾಲರ ಆದೇಶದ ಮೇರೆಗೆ ಉಲ್ಲೇಖಿತ ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ. ಸದರಿ ಅಧಿಸೂಚನೆಯಲ್ಲಿನ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಕಂಡಿಕೆ 13ರನ್ವಯ ರಾಜ್ಯ ಮಟ್ಟದ ಕಛೇರಿಗಳನ್ನು ಗುರುತಿಸಲಾಗಿದ್ದು, ಸದರಿ ಕಛೇರಿಗಳಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗಾಗಿ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಶೇ.8ರಷ್ಟು ಹುದ್ದೆಗಳನ್ನು ಕಾಯ್ದಿರಿಸಬೇಕಾಗಿರುತ್ತದೆ ಹಾಗೂ ಆ ಸಂಬಂಧ ಕ್ರಮ ಕೈಗೊಳ್ಳಲು ಸಕ್ಷಮ ನೇಮಕಾತಿ ಪ್ರಾಧಿಕಾರಕ್ಕೆ ಅಧಿಕಾರ ನೀಡಲಾಗಿರುತ್ತದೆ.

ಮೇಲೆ ತಿಳಿಸಿರುವ ಆದೇಶದ ರೀತ್ಯಾ ಹೈದರಾಬಾದ್-ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಕರ್ನಾಟಕ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಶೇ.8ರಷ್ಟು ಮೀಸಲಾತಿಯನ್ನು ಸರ್ಕಾರಿ ಸೇವೆಯ 'ಎ' ದರ್ಜೆ ಕಿರಿಯ ಶ್ರೇಣಿಯ ಹುದ್ದೆಯ ಹಂತದವರೆಗೆ ಪರಿಗಣಿಸಬೇಕಾಗಿರುತ್ತದೆ.

ವಿಧಾನಸಭೆ ಸಚಿವಾಲಯದ ವೃಂದಬಲದಲ್ಲಿ ಶೇ.೮ರಷ್ಟು ಹುದ್ದೆಗಳನ್ನು ಈ ಸಚಿವಾಲಯದ ನೇಮಕಾತಿ ನಿಯಮಾವಳಿಗಳ ರೀತ್ಯಾ ಹಾಗೂ ಸಂದರ್ಭಾನುಸಾರವಾಗಿ ಕಾಯ್ದಿರಿಸಿ, ಕಾಯ್ದಿರಿಸಲಾಗಿರುವ ಹುದ್ದೆಗಳನ್ನು ಸ್ಥಳೀಯ ವೃಂದ (Local Cadre) ಎಂದು ಗುರುತಿಸಬೇಕಾಗಿರುತ್ತದೆ ಹಾಗೂ ಇನ್ನುಳಿದ ಹುದ್ದೆಗಳನ್ನು ಮಾತೃ ವೃಂದ(Parent Cadre) ಎಂದು ಗುರುತಿಸಬೇಕಾಗಿರುತ್ತದೆ.

ಉಲ್ಲೇಖಿತ ಅಧಿಸೂಚನೆಯ ರೀತ್ಯಾ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಪ್ರಯೋಜನ ಪಡೆಯುವ ಅಭ್ಯರ್ಥಿಗಳು ಸದರಿ ಅಧಿಸೂಚನೆಯ ಕ್ರ.ಸಂ.(6)ರಲ್ಲಿ ಸೂಚಿಸಿರುವ ನಿಬಂಧನೆಗಳಿಗೆ ಒಳಪಟ್ಟಿರುತ್ತಾರೆ.

ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳು ಸ್ಥಳೀಯ ವೃಂದದಲ್ಲಿ(Local Cadre) ಮುಂದುವರೆಯಲು ತಮ್ಮ ಆಯ್ಕೆಯನ್ನು ನೀಡಬೇಕಾಗಿರುತ್ತದೆ. ಅಲ್ಲದೆ ಆಯ್ಕೆ ನೀಡಿರುವ ಅಭ್ಯರ್ಥಿಗಳು ಸ್ಥಳೀಯ ವೃಂದದಲ್ಲಿಯೇ 'ಎ' ದರ್ಜೆಯ ಕಿರಿಯ ಶ್ರೇಣಿ ಹುದ್ದೆಯ ಮುಂಬಡ್ತಿ ಪಡೆಯುವವರೆಗೆ ಅದೇ ವೃಂದದಲ್ಲಿ ಮುಂದುವರೆಯಬೇಕಾಗಿರುತ್ತದೆ ಹಾಗೂ ಅಂತಹ ನೌಕರರ ಜ್ಯೇಷ್ಠತೆ, ಮುಂಬಡ್ತಿ ಮತ್ತು ಧಾರಣಾಧಿಕಾರವು (ಲೀನ್) ಅದೇ ವೃಂದದಲ್ಲಿ ಮುಂದುವರಿಯತಕ್ಕದ್ದು. ಈ ಸಂಬಂಧ ಅಧಿಕಾರಿಗಳು/ನೌಕರರುಗಳು ನೀಡುವ ಆಯ್ಕೆಯು ಹಿಂಪಡೆಯಲಾಗದ ಆಯ್ಕೆಯಾಗಿರುತ್ತದೆ.

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ವಿಧಾನಸಭೆ ಸಚಿವಾಲಯದ ಸೇವೆಯಲ್ಲಿನ ಹುದ್ದೆಗಳಲ್ಲಿ ಗ್ರೂಪ್ 'ಎ' ವೃಂದದಿಂದ ಗ್ರೂಪ್'ಸಿ' ವೃಂದದವರೆಗೆ ವೃಂದಾವಾರು ಹೈದರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಿರುವ ಶೇ.೮ರಷ್ಟು ಹುದ್ದೆಗಳನ್ನು ಮೀಸಲಿರಿಸಿ ಉಲ್ಲೇಖ(2)ರ ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ. ಸದರಿ ಅಧಿಸೂಚನೆಯು ಮುಂದುವರೆದಂತೆ, ಸಚಿವಾಲಯದ ಸೇವೆಯಲ್ಲಿನ ಹುದ್ದೆಗಳಲ್ಲಿ ಗ್ರೂಪ್ 'ಡಿ' ವೃಂದದ ವೃಂದಾವಾರು ಹೈದರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಿರುವ ಶೇ.೮ರಷ್ಟು ಹುದ್ದೆಗಳನ್ನು ಈ ಕೆಳಕಂಡಂತೆ ಮೀಸಲಿರಿಸಿ ಅನುಸೂಚಿಯಲ್ಲಿರುವಂತೆ ಈ ಮೂಲಕ ಅಧಿಸೂಚಿಸಲಾಗಿದೆ:

## ಅನುಸೂಚಿ

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದಬಲ (ವೃ. ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) ಮಾತೃ ವೃಂದ (Parent Cadre) | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ-ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ.೮ರಷ್ಟು ಹುದ್ದೆಗಳು ಸ್ಥಳೀಯ ವೃಂದ (Local Cadre) | | |
|---|---|---|---|---|---|---|---|---|
| | | | | | | ಮುಂಬಡ್ತಿ | ನೇ.ನೇ. | ಒಟ್ಟು |
| 1 | 2 | 3 | 4 | 5 | | 6 | 7 | 8 |
| ಗ್ರೂಪ್-ಡಿ ವೃಂದ | | | | | | | | |
| 31 | ಹಿರಿಯ ವಾಹನ ಚಾಲಕರು | 14550-26700 | 17 | (ಶೇ 100 ಮುಂಬಡ್ತಿ) | | 02 | - | 02 |
| | | | | 17 | - | | | |

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದಬಲ (ವೃ. ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) ಮಾತೃ ವೃಂದ (Parent Cadre) | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ-ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ.8ರಷ್ಟು ಹುದ್ದೆಗಳು ಸ್ಥಳೀಯ ವೃಂದ (Local Cadre) ಮುಂಬಡ್ತಿ | ನೇ.ನೇ. | ಒಟ್ಟು |
|---|---|---|---|---|---|---|---|---|
| 1 | 2 | 3 | 4 | 5 | | 6 | 7 | 8 |
| 32 | ವಾಹನ ಚಾಲಕರು | 11600-21000 | 78 | (ಶೇ 50 ಮುಂಬಡ್ತಿ+ಶೇ.50 ನೇ.ನೇ.) | | 04 | 04 | 08 |
| | | | | 39 | 39 | | | |
| 33 | ಬಡಗಿ | 10400-16400 | 02 | (ಶೇ 100 ನೇ.ನೇ) | | -- | 01 | 01 |
| | | | | -- | 02 | | | |
| 34 | ಲಿಫ್ಟ್ ಚಾಲಕ | 11000-19000 | 21 | (ಶೇ 100 ಮುಂಬಡ್ತಿ) | | 02 | -- | 02 |
| | | | | 21 | -- | | | |
| 35 | ಜಮೇದಾರ್ | 11000-19000 | 68 | (ಶೇ 100 ಮುಂಬಡ್ತಿ) | | 06 | -- | 06 |
| | | | | 68 | -- | | | |
| 36 | ದಲಾಯತ್/ಕಾವಲುಗಾರ/ರೀಕ್ಯಾನರ್ | 9600-14550 | 153 | (ಶೇ 100 ನೇ.ನೇ) | | -- | 13 | 13 |
| | | | | -- | 153 | | | |
| 37 | ಸ್ವೀಪರ್ | 9600-14550 | 40 | (ಶೇ 100 ನೇ.ನೇ) | | -- | 04 | 04 |
| | | | | -- | 40 | | | |
| 38 | ಮಸಾಜರ್ | 10400-16400 | 08 | (ಶೇ 100 ನೇ.ನೇ) | | -- | 01 | 01 |
| | | | | -- | 08 | | | |

ಮೇಲೆ ಅಧಿಸೂಚಿಸಲಾಗಿರುವ ಈ ಸಚಿವಾಲಯದ ಗ್ರೂಪ್ 'ಡಿ' ವೃಂದದ ವಿವಿಧ ಹುದ್ದೆಗಳಲ್ಲಿನ ಹೈದ್ರಾಬಾದ್-ಕರ್ನಾಟಕ ಪ್ರದೇಶದವರಿಗಾಗಿ ಮುಂಬಡ್ತಿಯಲ್ಲಿ ಹಾಗೂ ನೇರ ನೇಮಕಾತಿಯಲ್ಲಿ ಶೇ.8ರಷ್ಟು ಹುದ್ದೆಗಳನ್ನು ಮೀಸಲಿರಿಸಿ ಗುರುತಿಸಲಾಗಿದೆ. ಸದರಿ ಹುದ್ದೆಗಳಿಗೆ ಸಂಬಂಧಿಸಿದಂತೆ ಸಚಿವಾಲಯದ ಗ್ರೂಪ್-ಡಿ ವೃಂದದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರುಗಳ ಪೈಕಿ ತಮ್ಮ ಸೇವಾ ಪುಸ್ತಕದಲ್ಲಿ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಯವರೆಂದು ಆ ಜಿಲ್ಲೆಗಳಲ್ಲಿನ ಸ್ವಂತ ಊರು ಘೋಷಣೆ ಮಾಡಲಾಗಿರುವ ನೌಕರರುಗಳು ಹೈದರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಿರುವ ಶೇ.8ರಷ್ಟು ಹುದ್ದೆಗಳಲ್ಲಿ ಗುರುತಿಸಲಾಗಿರುವ ಹುದ್ದೆಗಳಿಗೆ ಮುಂಬಡ್ತಿ ಪಡೆಯಲು ಹಾಗೂ ಸದರಿ ಸ್ಥಳೀಯ (Local Cadre) ವೃಂದದಲ್ಲಿ ಮುಂದುವರಿಯಲು ಇಚ್ಛಿಸುವ ನೌಕರರುಗಳು ತಮ್ಮ ಇಚ್ಛೆಯನ್ನು ಲಿಖಿತ ಮೂಲಕ 10 ದಿನಗಳೊಳಗಾಗಿ ಆಡಳಿತ ಶಾಖೆ-1ಕ್ಕೆ ನೀಡತಕ್ಕದ್ದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಒಂದು ವೇಳೆ ಈ ಸಂಬಂಧ ಸ್ವೀಕರಿಸಲಾಗುವ ಆಯ್ಕೆಗಳು ನಿಗಧಿಪಡಿಸಿರುವ ಹುದ್ದೆಗಳಿಗೆ ಮೀರಿದ್ದಲ್ಲಿ ಆಯ್ಕೆಗಳನ್ನು ಚಾಲ್ತಿಯಲ್ಲಿರುವ ಜ್ಯೇಷ್ಠತಾ ಪಟ್ಟಿಯ ಪರಸ್ಪರ ಜ್ಯೇಷ್ಠತೆಯ ಆಧಾರದ ಮೇಲೆ ನಿಗಧಿಪಡಿಸಿರುವ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಪರಿಗಣಿಸಲಾಗುವುದು.

ಸಭಾಧ್ಯಕ್ಷರ ಆದೇಶಾನುಸಾರ,

**ನಜೀರ್ ಅಹಮದ್**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ ಸಚಿವಾಲಯ.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೦, ೨೦೧೪ (ಭಾದ್ರಪದ ೨೯, ಶಕ ವರ್ಷ ೧೯೩೬) | ನಂ. ೫೮೩ |
|---|---|---|
| Part– III | Bangalore, Saturday, September 20, 2014 (Bhadrapada 29, Shaka Varsha 1936) | No. 583 |

### ನಗರಾಭಿವೃದ್ಧಿ ಸಚಿವಾಲಯ

#### ಅಧಿಸೂಚನೆ

**ಸಂಖ್ಯೆ: ನಅಇ 215 ಎಂಎಲ್‌ಆರ್ 2013, ಬೆಂಗಳೂರು, ದಿನಾಂಕ 11.09.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3ನೇ ಪ್ರಕರಣದೊಂದಿಗೆ ಓದಿಕೊಂಡ 9ನೇ ಮತ್ತು 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ ಎ ಮತ್ತು ಅನುಸೂಚಿ ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಶಿಡ್ಲಘಟ್ಟ ಪುರಸಭೆ ಪ್ರದೇಶವನ್ನು 'ಶಿಡ್ಲಘಟ್ಟ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಶಿಡ್ಲಘಟ್ಟ ನಗರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ–ಎ**

1) ಶಿಡ್ಲಘಟ್ಟ ಪಟ್ಟಣ
2) ಹಳ್ಳಿಗಳು: ಶಿಡ್ಲಘಟ್ಟ, ಗಾಂಧಿನಗರ 1ನೇ ಕಾರ್ಮಿಕ ನಗರ, 2ನೇ ಕಾರ್ಮಿಕನಗರ, 3ನೇ ಕಾರ್ಮಿಕನಗರ, ಅಜಾದ್‌ನಗರ, ಖಾಸಿಂ ಪಾಳ್ಯ, ಮಹಬೂಬ್‌ನಗರ

**ಅನುಸೂಚಿ–ಬಿ**

**ಪೂರ್ವಕ್ಕೆ :** 1) ಶಿಡ್ಲಘಟ್ಟ ಹೊಸಕೋಟೆ ಹೊರವಲಯದ ರಸ್ತೆಯಿಂದ ಪ್ರಾರಂಭಗೊಂಡು ಪೂರ್ವಾಭಿಮುಖವಾಗಿ ಗೌಡನಕೆರೆ ಅಂಗಳದಿಂದ ಹಾಗೂ ಶಿಡ್ಲಘಟ್ಟ ಚಿಂತಾಮಣಿ ರಸ್ತೆಯನ್ನು ದಾಟಿಕೊಂಡು ಭೂದಾಳ ಗ್ರಾಮದ ಸರ್ವೆ ನಂಬರುಗಳ ಜಮೀನಿಗೆ ಹೊಂದಿಕೊಂಡಂತೆ ಶಿಡ್ಲಘಟ್ಟ ಚಿಂತಾಮಣಿ ರೈಲು ಮಾರ್ಗದಲ್ಲಿ ದಾಟಿಕೊಂಡು ಶಿಡ್ಲಘಟ್ಟ ಸರ್ವೆ.ನಂಬರ್ 85ಕ್ಕೆ ಅಂತ್ಯಗೊಳ್ಳುತ್ತದೆ.

**ಪಶ್ಚಿಮಕ್ಕೆ :** 2) ನಲ್ಲಮರದಹಳ್ಳಿ ಗ್ರಾಮದ ಸರ್ವೆ ನಂಬರ್ 128ರಿಂದ ಪ್ರಾರಂಭಗೊಂಡು ದಕ್ಷಿಣಾಭಿಮುಖವಾಗಿ ಶಿಡ್ಲಘಟ್ಟ–ಚಿಕ್ಕಬಳ್ಳಾಪುರ ರೈಲು ಮಾರ್ಗವನ್ನು ದಾಟಿಕೊಂಡು ಪಿ.ಡಬ್ಲ್ಯುಡಿ ಬೈಪಾಸ್ ರಸ್ತೆ ಮುಖಾಂತರ ಶಿಡ್ಲಘಟ್ಟ–ಚಿಕ್ಕಬಳ್ಳಾಪುರ ಕ್ರಾಸ್‌ನಿಂದ ಚಿಂತಾಮಣಿ ರಸ್ತೆ ಮಾರ್ಗದಲ್ಲಿ ಮುಂದುವರೆದು ಶಿಡ್ಲಘಟ್ಟ ಗ್ರಾಮದ ಸರ್ವೆ ನಂಬರ್ 388ರ ಜಮೀನು ಪ್ರದೇಶದಲ್ಲಿ ಮುಕ್ತಾಯಗೊಳ್ಳುವ ಪ್ರದೇಶ

**ಉತ್ತರಕ್ಕೆ :** 3) ಶಿಡ್ಲಘಟ್ಟ 17ರ ಪ್ರದೇಶದಿಂದ ಮುಂದುವರೆದು ಪೂರ್ವಾಭಿಮುಖವಾಗಿ ಮುಂದುವರೆದಂತೆ ಇದೇ ಗ್ರಾಮದ ಸರ್ವೆ ನಂ. 18, 21, 25, 27, 28, 30, 31, 32, 33, 34, 35, 36, 37 ಪ್ರದೇಶಗಳನ್ನು ಹೊಂದಿಕೊಂಡಂತೆ ತಾತಹಳ್ಳಿ ರಸ್ತೆಯ ಮುಖಾಂತರ ಶಿಡ್ಲಘಟ್ಟ ಗ್ರಾಮದ ಸರ್ವೆ ನಂ. 85ಕ್ಕೆ ಕೊನೆಗೊಳ್ಳುತ್ತದೆ.

**ದಕ್ಷಿಣಕ್ಕೆ :** 4) ಶಿಡ್ಲಘಟ್ಟ ಚಿಂತಾಮಣಿ ರಸ್ತೆಯಿಂದ ಪೂರ್ವಾಭಿಮುಖವಾಗಿ ಮುಂದುವರೆದು ಶಿಡ್ಲಘಟ್ಟ ಗ್ರಾಮದ ಸರ್ವೆ ನಂ. 386 ಜಮೀನುಗಳನ್ನು ಒಳಗೊಂಡಂತೆ ಮುಂದುವರೆದು ಇದೇ ಗ್ರಾಮದ ಸರ್ವೆ ನಂ. 299ರ ಮುಖಾಂತರ ಹಾಗೂ ಇದೇ ಗ್ರಾಮದ ಸರ್ವೆ ನಂ. 277ಕ್ಕೆ ಕೊನೆಗೊಂಡು ಶಿಡ್ಲಘಟ್ಟ ಹೊಸಕೋಟೆ ರಸ್ತೆಯ ಹೊರವಲಯದ ರಸ್ತೆಗೆ ಕೊನೆಗೊಳ್ಳುವ ಪ್ರದೇಶವನ್ನು ಒಳಗೊಂಡಿರುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೦, ೨೦೧೪ (ಭಾದ್ರಪದ ೨೯, ಶಕ ವರ್ಷ ೧೯೩೬) | ನಂ. ೫೮೪ |
|---|---|---|
| **Part– III** | **Bangalore, Saturday, September 20, 2014 (Bhadrapada 29, Shaka Varsha 1936)** | **No. 584** |



## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ನಅಇ 212 ಎಂಎಲ್‌ಆರ್ 2013, ಬೆಂಗಳೂರು, ದಿನಾಂಕ 11.09.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3ನೇ ಪ್ರಕರಣದೊಂದಿಗೆ ಓದಿಕೊಂಡ 9ನೇ ಮತ್ತು 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ ಎ ಮತ್ತು ಅನುಸೂಚಿ ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಹಿರಿಯೂರು ಪುರಸಭೆ ಪ್ರದೇಶವನ್ನು 'ಹಿರಿಯೂರು ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಹಿರಿಯೂರು ನಗರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಬಂಧ–ಎ**

(1) ಹಿರಿಯೂರು ಪಟ್ಟಣ

(2) ಗ್ರಾಮಗಳು (1) ಸೋಮೇರಹಳ್ಳಿ
(2) ಕೃಷ್ಣಾಂಬುದಿ
(3) ಮ್ಯಾಕ್ಲೂರಹಳ್ಳಿ
(4) ಯರದಕಟ್ಟೆ

**ಅನುಬಂಧ–ಬಿ**

**ಪೂರ್ವಕ್ಕೆ:–** ಹಿರಿಯೂರು ಪುರಸಭೆಯ ಪೂರ್ವದ ಗುಡಿಯ ಮ್ಯಾಕ್ಲೂರಹಳ್ಳಿ ಗ್ರಾಮದ ಸ.ನ.33ರ ಉತ್ತರ ಪೂರ್ವ ದಂಡಗುಂಟೆ ಪ್ರಾರಂಭಿಸಿ ದಕ್ಷಿಣಕ್ಕೆ ಮುಂದುವರಿದು, ಮ್ಯಾಕ್ಲೂರಹಳ್ಳಿ ಗ್ರಾಮದ ರಿ.ಸ.ನಂ.33, 34, 35, 36, 38, 39, 37, 40, 41ರ ಪೂರ್ವದ ದಂಡೆ ಸೇರಿ ಮುಂದುವರಿದು ಬಬ್ಬೂರು ಗ್ರಾಮದ ರಿ.ಸ.ನಂ.41, 40, 39, 37, 36, 35, 284, 185, ಹಾದು ಧರ್ಮಪುರ ಪ್ರಾಂತಿಯ ಹೆದ್ದಾರಿಯನ್ನು ದಾಟಿ ಬಬ್ಬೂರು ಗ್ರಾಮದ ರಿ.ಸ.ನಂ: 283, 282, 184, 186 ಹಾಗೂ ವಾಣಿವಿಲಾಸ ನಾಲೆಯ ದಂಡೆ ಮುಖಾಂತರ ದಕ್ಷಿಣ ಕಡೆಗೆ ಸಾಗುತ್ತಾ ಸ.ನಂ:331, 322ರ ಪೂರ್ವದ ಕಡೆಗೆ ಸಾಗುತ್ತಾ, ಹಿರಿಯೂರು ಗ್ರಾಮದ ರಿ.ಸ.ನಂ.9, 200, 10, 201, 202, 203, 204, 25, 12, 205, 207, 208, 209ರ ಉತ್ತರದ ದಂಡೆ ಮೂಲಕ ಹಾದು ಸರ್ವೆ ನಂ.209ರ ಉತ್ತರ ಪೂರ್ವದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಮುಂದಕ್ಕೆ ದಕ್ಷಿಣದ ಕಡೆಗೆ ಸಾಗುತ್ತಾ, ಹಿರಿಯೂರು ಗ್ರಾಮದ ಸ.ನಂ:209, 210, 213, 214, 215ರ ಪೂರ್ವದ ದಂಡೆಗುಂಟೆ ಮೂಲಕ ಹಾದು ವೇದಾವತಿ ನದಿಯನ್ನು ದಾಟಿ ಹಿರಿಯೂರು ಗ್ರಾಮದ ಸ.ನಂ:399, 398, 23, 404, 26, 448 ಪೂರ್ವದ ದಂಡೆ ಗುಂಟೆ ಮೂಲಕ ಹಾದು ಸ.ನಂ: 399, 398, 23, 404, 2, 26ರ ದಕ್ಷಿಣ ಪೂರ್ವದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಪಶ್ಚಿಮದ ಕಡೆಗೆ ಸಾಗುತ್ತಾ ರಾಷ್ಟ್ರೀಯ ಹೆದ್ದಾರಿ ನಂ:4ನ್ನು ದಾಟಿ ಮತ್ತು ದಕ್ಷಿಣ ಕಡೆಗೆ ಮುಂದುವರಿದು ಹಿರಿಯೂರು ಗ್ರಾಮದ ಸ.ನಂ:222ರ ದಕ್ಷಿಣ ಪೂರ್ವದ ಮೂಲೆಯನ್ನು ಸೇರುತ್ತದೆ.

**ದಕ್ಷಿಣಕ್ಕೆ:–** ಹಿರಿಯೂರು ಗ್ರಾಮದ ಸ.ನಂ;222ರ ದಕ್ಷಿಣ ಪೂರ್ವದ ಮೂಲೆಯಿಂದ ಪ್ರಾರಂಭಿಸಿ ಪಶ್ಚಿಮದ ಕಡೆಗೆ ಸಾಗುತ್ತಾ ಹಿರಿಯೂರು ಗ್ರಾಮದ ಸ.ನಂ:222, 28, 35, 235ರ ದಕ್ಷಿಣದ ದಂಡೆ ಮುಖಾಂತರ ಹಾದು ವಾಣಿ ವಿಲಾಸ ನಾಲೆಯನ್ನು ದಾಟಿ ಹಿರಿಯೂರು ಗ್ರಾಮದ ಸ.ನಂ;36 ಮತ್ತು ಸೋಮೇರಹಳ್ಳಿಯ ಗ್ರಾಮದ ಗಡಿಯನ್ನು ದಾಟಿ ಸೋಮೇರಹಳ್ಳಿ ಗ್ರಾಮದ ಸ.ನಂ:33, 32, 27, 26, 158, 22, 21ರ ದಕ್ಷಿಣ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಉತ್ತರದ ಕಡೆಗೆ ಮುಂದುವರಿದು ರಾಜ್ಯ ಹೆದ್ದಾರಿ (ಹುಳಿಯಾರು ರಸ್ತೆ)ಯನ್ನು ದಾಟಿ ಸೋಮೇರಹಳ್ಳಿ ಗ್ರಾಮದ ಸ.ನಂ:130ರ ದಕ್ಷಿಣ ಪೂರ್ವದ ಮೂಲೆಯನ್ನು ಸೇರಿ ಅಲ್ಲಿಂದ ಪಶ್ಚಿಮದ ಕಡೆಗೆ ಮುಂದುವರಿದು ಸ.ನಂ:130, 127ರ ದಕ್ಷಿಣ ದಂಡೆ ಮೂಲಕ ಹಾದು ಸ.ನಂ:127ರ ದಕ್ಷಿಣ ಪಶ್ಚಿಮ ಮೂಲೆಯನ್ನು ಸೇರುತ್ತದೆ.

**ಪಶ್ಚಿಮಕ್ಕೆ:–** ಸೋಮೇರಹಳ್ಳಿ ಗ್ರಾಮದ ಸ.ನಂ:127ರ ದಕ್ಷಿಣ ಪಶ್ಚಿಮದ ಮೂಲೆಯಿಂದ ಪ್ರಾರಂಭಿಸಿ ಉತ್ತರದ ಕಡೆಗೆ ಮುಂದುವರಿದು ಹಿರಿಯೂರು ಗ್ರಾಮದ ಗಡಿಯನ್ನು ಸೇರಿ ಹಿರಿಯೂರು ಗ್ರಾಮದ ಗಡಿಯ ಮುಖಾಂತರ ಪೂರ್ವಕ್ಕೆ ಸಾಗುತ್ತಾ ಸೋಮೇರಹಳ್ಳಿ ಗ್ರಾಮದ ಸ.ನಂ:127, 128ರ ಉತ್ತರ ದಂಡೆ ಗುಂಟ ಹಾದು ಸರ್ವೆ ನಂ:129ರ ಉತ್ತರದ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಮುಂದಕ್ಕೆ ಉತ್ತರದ ಕಡೆಗೆ ತಿರುಗಿ ಹಿರಿಯೂರು ಗ್ರಾಮದ ಸ.ನಂ:84, 85, 86, 89, 90, 96ರ ಪಶ್ಚಿಮದ ದಂಡೆ ಗುಂಟ ಹಾದು ಕೃಷ್ಣಾಂಬುದಿ ಹಾಗು ಹಿರಿಯೂರು ಗ್ರಾಮದ ಗಡಿ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಮುಂದಕ್ಕೆ ಉತ್ತರದ ಕಡೆಗೆ ಸಾಗುತ್ತಾ ಕೃಷ್ಣಾಂಬುದಿ ಗ್ರಾಮದ ಸ.ನಂ:95, 96ರ ಪಶ್ಚಿಮದ ದಂಡೆ ಮುಖಾಂತರ ಹಾದು ಸ.ನಂ:4, 3, 89, 80, 79, 71, 69ರ ಪಶ್ಚಿಮದ ದಂಡೆ ಗುಂಟ ಹಾದು ಸ.ನಂ.1ರ ಉತ್ತರ ಪಶ್ಚಿಮದ ಮೂಲೆಯನ್ನು ಹಾಗೂ ವಾಣಿವಿಲಾಸ ಸಾಗರದ ಬಲನಾಲೆಯನ್ನು ದಾಟಿ ಅಲ್ಲಿಂದ ಮುಂದಕ್ಕೆ ಉತ್ತರದ ಕಡೆಗೆ ಸಾಗುತ್ತಾ ಮ್ಯಾಕ್ಲೂರಹಳ್ಳಿ ಸ.ನಂ:68 ಪಶ್ಚಿಮದ ದಂಡೆ ಮುಖಾಂತರ ಹೊಸದುರ್ಗದ ಕಡೆಗೆ ಹೋಗುವ ರಸ್ತೆಯನ್ನು ದಾಟಿ ಮುಂದಕ್ಕೆ ಸರ್ವೆ ನಂ:71ರ ಉತ್ತರ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಯರದಕಟ್ಟೆ ಗ್ರಾಮದ ಸ.ನಂ:26, 33ರ ದಕ್ಷಿಣದ ದಂಡೆಗುಂಟೆ ಹಾಗೂ ಸ.ನಂ:33ರ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಉತ್ತರದ ಕಡೆಗೆ ಸಾಗುತ್ತಾ ಸ.ನಂ:33, 31, 47, 30, 29, 112, 113, 114ರ ಉತ್ತರ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಪಶ್ಚಿಮದ ಕಡೆಗೆ ಸಾಗುತ್ತಾ ಯರದಕಟ್ಟೆ ಗ್ರಾಮದ ಸ.ನಂ:2ರ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಉತ್ತರಕ್ಕೆ ಸಾಗುತ್ತಾ ಸ.ನಂ:2ರ ಉತ್ತರ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಪಶ್ಚಿಮದ ಕಡೆಗೆ ಸಾಗುತ್ತಾ ಯರದಕಟ್ಟೆ ಗ್ರಾಮದ ಸ.ನಂ:7, 6, 5ರ ದಕ್ಷಿಣದ ದಂಡೆ ಗುಂಟ ಹಾಗೂ ಸ.ನಂ:5ರ ದಕ್ಷಿಣ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಉತ್ತರಕ್ಕೆ ಮುಂದುವರಿದು ಯರದಕಟ್ಟೆ ಗ್ರಾಮದ ಸ.ನಂ;5ರ ಉತ್ತರ ಪಶ್ಚಿಮದ ಮೂಲೆಯನ್ನು ಸೇರುತ್ತದೆ.

**ಉತ್ತರಕ್ಕೆ:–** ಯರದಕಟ್ಟೆ ಗ್ರಾಮದ ಸ.ನಂ:5ರ ಉತ್ತರ ಪಶ್ಚಿಮದ ಮೂಲೆಯಿಂದ ಪ್ರಾರಂಭಿಸಿ ಪೂರ್ವಕ್ಕೆ ಸಾಗುತ್ತಾ ಸ.ನಂ:5, 6, 8, 12, 13, 15, 110, 16ರ ಉತ್ತರ ಪೂರ್ವದ ಮೂಲೆಯನ್ನು ಸೇರಿ ಅಲ್ಲಿಂದ ದಕ್ಷಿಣದ ಕಡೆಗೆ ಸಾಗುತ್ತಾ ಯರದಕಟ್ಟೆ ಗ್ರಾಮದ ಸ.ನಂ:19ರ ಪೂರ್ವದ ದಂಡೆ ಮುಖಾಂತರ ಹಾದು ಮ್ಯಾಕ್ಲೂರಹಳ್ಳಿ ಗ್ರಾಮದ ಸ.ನಂ:88ರ ಉತ್ತರ ಪಶ್ಚಿಮದ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಪೂರ್ವದ ಕಡೆಗೆ ಸಾಗುತ್ತಾ ಮ್ಯಾಕ್ಲೂರಹಳ್ಳಿ ಗ್ರಾಮದ ಸ.ನಂ:88, 83, 82, 85, 54, 53, 44, 21, 22, 23, 24, 26 ಉತ್ತರ ದಂಡೆ ಮೂಲಕ ಹಾದು ಪ್ರಾಂತೀಯ ಹೆದ್ದಾರಿ (ಬಳ್ಳಾರಿ ರಸ್ತೆ) ಮ್ಯಾಕ್ಲೂರಹಳ್ಳಿ ಗ್ರಾಮದ ಸ.ನಂ:33ರ ಉತ್ತರ ಪೂರ್ವದ ಗಡಿಯನ್ನು ಸೇರುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೦, ೨೦೧೪ (ಭಾದ್ರಪದ ೨೯, ಶಕ ವರ್ಷ ೧೯೩೬) | ನಂ. ೫೮೫ |
|---|---|---|
| Part– III | Bangalore, Saturday, September 20, 2014 (Bhadrapada 29, Shaka Varsha 1936) | No. 585 |


## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 231 ಎಂಎಲ್‌ಆರ್ 2013, ಬೆಂಗಳೂರು, ದಿನಾಂಕ 11.09.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3ನೇ ಪ್ರಕರಣದೊಂದಿಗೆ ಓದಿಕೊಂಡ 9ನೇ ಮತ್ತು 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ ಎ ಮತ್ತು ಅನುಸೂಚಿ ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಹೊಸಕೋಟೆ ಪುರಸಭೆ ಪ್ರದೇಶವನ್ನು 'ಹೊಸಕೋಟೆ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಹೊಸಕೋಟೆ ನಗರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ–ಎ**

1. ಹೊಸಕೋಟೆ ಪಟ್ಟಣ
2. ಗ್ರಾಮಗಳು–
   1. ದಂಡುಪಾಳ್ಯ
   2. ಕೊಲತ್ತೂರು
   3. ವರದಾಪುರ
   4. ಕಣ್ಣೂರಹಳ್ಳಿ

**ಅನುಸೂಚಿ–ಬಿ**

ಈ ಗಡಿ ಪ್ರದೇಶದ ಪೂರ್ವ ಕಡೆಯಿಂದ ಸರ್ವೆ ನಂ: 200 ಹಾಗೂ ಪಶ್ಚಿಮ ಭಾಗದ ಸರ್ವೆ ನಂ: 96, ಕಣ್ಣೂರಹಳ್ಳಿ ಗ್ರಾಮದಿಂದ ಉತ್ತರದ ಕಡೆ ಮುಂದುವರಿಸಿ ಪೂರ್ವದ ಕಡೆ ಸರ್ವೆ ನಂ: 102 ಕಣ್ಣೂರಹಳ್ಳಿ ಗ್ರಾಮದಿಂದ ಮುಂದುವರೆದು ಸರ್ವೆ ನಂ: 103ರ ವರೆಗೆ ಹಾದು ಅಲ್ಲಿಂದ ಉತ್ತರದ ಕಡೆ ತಿರುಗಿ ಅಲ್ಲಿಂದ ಮುಂದುವರೆದು ಪೂರ್ವದ ಕಡೆ ಸರ್ವೆ ನಂ: 103, 105, 106, 107, 154 ಅಲ್ಲಿಂದ ಪಶ್ಚಿಮ ಮೂಲ ಇರುವ ಸರ್ವೆ ನಂ: 7ನ್ನು (ವರದಾಪುರ) ಬಳಸಿಕೊಂಡು ಉತ್ತರಕ್ಕೆ ಮುಂದುವರೆದು ವರದಾಪುರ, ದಂಡುಪಾಳ್ಯ ಹಾಗೂ ಹೊಸಕೋಟೆ ಸರಹದ್ದನ್ನು ಹಾದು ಉತ್ತರಾಭಿಮುಖದ ಸರ್ವೆ ನಂ: 15, ದಂಡುಪಾಳ್ಯ ಇದನ್ನು ಬಳಸಿಕೊಂಡು ಪೂರ್ವದ ಕಡೆ ಹೋಗಿ ದಂಡುಪಾಳ್ಯ, ಹೊಸಕೋಟೆ, ಚಿಕ್ಕಹುಲ್ಲೂರು ಅಮಾನಿಕೆರೆ ಈ ಸರಹದ್ದುಗಳನ್ನು ಮುಟ್ಟಿಸಿಕೊಂಡು ದಕ್ಷಿಣ ಭಾಗವನ್ನು ಮುಟ್ಟಿಸಿಕೊಂಡು ಉತ್ತರದ ಮೂಲ ಸರ್ವೆ ನಂ: 137 ದಂಡುಪಾಳ್ಯವನ್ನು ಮುಟ್ಟಿ ಅಲ್ಲಿಂದ ತಿರುಗಿ ಪೂರ್ವದಿಂದ ಉತ್ತರದ ಕಡೆ ಎಲ್ಲಾ ಸರಹದ್ದುಗಳನ್ನು ಮುಟ್ಟಿಸಿಕೊಂಡು ಸರ್ವೆ ನಂ: 154 ಕೊಳತ್ತೂರು ಗ್ರಾಮದಿಂದ ಉತ್ತರದ ಕಡೆ ತಿರುಗಿ ಸರ್ವೆ ನಂ: 155ರ ಕಡೆ ತಿರುಗಿ ಪೂರ್ವದ ಕಡೆ ಇರವ ಸರ್ವೆ ನಂ: 156ನ್ನು ಮುಟ್ಟಿಸಿ ಅಲ್ಲಿಂದ ಪೂರ್ವದ ಕಡೆ ತಿರುಗಿ ಸರ್ವೆ ನಂ: 158ನ್ನು ಮುಟ್ಟಿಸಿ ಅಲ್ಲಿಂದ

ದಕ್ಷಿಣದ ಕಡೆ ಹಾದು ಪೂರ್ವದ ಕಡೆ ಸರಹದ್ದಿನ ಸರ್ವೆ ನಂ: 158, 159, 151, 147, 139, 136 ಇವುಗಳನ್ನು ಹಾದು ಪಶ್ಚಿಮ ಕಡೆಯಿಂದ ಪೂರ್ವದ ಸರಹದ್ದಿಗೆ ತಿರುಗಿ ಸರ್ವೆ ನಂ: 131ನ್ನು ಮುಟ್ಟಿಸಿಕೊಂಡು ಸರ್ವೆ ನಂ: 25 ದಂಡುಪಾಳ್ಯ ಗ್ರಾಮದ ಮುಖಾರ ದಕ್ಷಿಣದ ಕಡೆ ಹಾದು ದಂಡುಪಾಳ್ಯ ಸರಹದ್ದನ್ನು ಬಳಸಿಕೊಂಡು ದಕ್ಷಿಣದಿಂದ ಪೂರ್ವದ ಮೂಲಕ ಸರ್ವೆ ನಂ: 50ರಿಂದ ಪಶ್ಚಿಮದ ಕಡೆ ಹೋಗಿ ನಂತರ ಉತ್ತರದಿಂದ ಪೂರ್ವದ ಕಡೆ ಹಾದು ಸರ್ವೆ ನಂ: 181ರ ಕಣ್ಣೂರಹಳ್ಳಿ ಗ್ರಾಮದ ಕಡೆ ಸೇರಿ ನಂತರ ದಕ್ಷಿಣ ಕಡೆಯಿಂದ ಸರ್ವೆ ನಂ: 181ರ ಕಣ್ಣೂರಹಳ್ಳಿ ಗ್ರಾಮದ ಮುಖಾಂತರ ಪಶ್ಚಿಮದ ಕಡೆ ಮುಟ್ಟಿ ನಂತರ ಪಶ್ಚಿಮದ ಮೂಲದಿಂದ ಸರ್ವೆ ನಂ: 14ನ್ನು ಮುಟ್ಟಿಸಿ ಅಲ್ಲಿಂದ ಉತ್ತರದ ಕಡೆಯಿಂದ ಪೂರ್ವದ ಮೂಲ ಬಳಿ ಇರುವ ಸರ್ವೆ ನಂ: 174ನ್ನು ಮುಟ್ಟಿ ಅಲ್ಲಿಂದ ಉತ್ತರದ ಕಡೆಯಿಂದ ಪೂರ್ವದ ಮೂಲ ಬಳಿ ಇರುವ ಸರ್ವೆ ನಂ: 174ನ್ನು ಮುಟ್ಟಿ ಅಲ್ಲಿಂದ ತಿರುಗಿ ಪಶ್ಚಿಮದ ಕಡೆ ಹಾಗು ಉತ್ತರದ ಸರಹದ್ದಿನ ಸರ್ವೆ ನಂ: 174ನ್ನು ಮುಟ್ಟಿಸಿ ಅಲ್ಲಿಂದ ಉತ್ತರದಿಂದ ಪೂರ್ವದ ಕಡೆ ಇರುವ ಸರ್ವೆ ನಂ: 146ನ್ನು ಮುಟ್ಟಿಸಿ ಅಲ್ಲಿಂದ ದಕ್ಷಿಣ ಕಡೆ ಹಾದು ಪೂರ್ವ ಕಡೆ ಇರುವ ಸರಹದ್ದು ಸರ್ವೆ ನಂ: 246, 145, 180, 131ನ್ನು ಮುಟ್ಟಿಸಿ ಅಲ್ಲಿಂದ ಪಶ್ಚಿಮದ ಕಡೆ ಹಾದು ಸರ್ವೆ ನಂ: 84, 88, 89, 90, 92, 94, 95 ಕಣ್ಣೂರಹಳ್ಳಿ ಗ್ರಾಮವನ್ನು ಮುಟ್ಟಿಸಿ ನಂತರ ದಕ್ಷಿಣ ಮೂಲ ಸರ್ವೆ ನಂ: 95 ಅಲ್ಲಿಂದ ಹಾದು ಉತ್ತರದ ಕಡೆ ಸರ್ವೆ ನಂ: 96 ರಿಂದ ಕಣ್ಣೂರಹಳ್ಳಿ ಗ್ರಾಮದ ಸರ್ವೆ ನಂ: 200ಕ್ಕೆ ಬಂದು ತಲುಪುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ


# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೦, ೨೦೧೪ (ಭಾದ್ರಪದ ೨೯, ಶಕ ವರ್ಷ ೧೯೩೬) | ನಂ. ೫೮೬ |
|---|---|---|
| Part– III | Bangalore, Saturday, September 20, 2014 (Bhadrapada 29, Shaka Varsha 1936) | No. 586 |


## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 230 ಎಂಎಲ್ಆರ್ 2013, ಬೆಂಗಳೂರು, ದಿನಾಂಕ 11.09.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3ನೇ ಪ್ರಕರಣದೊಂದಿಗೆ ಓದಿಕೊಂಡ 9ನೇ ಮತ್ತು 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ ಎ ಮತ್ತು ಅನುಸೂಚಿ ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಪುತ್ತೂರು ಪುರಸಭೆ ಪ್ರದೇಶವನ್ನು 'ಪುತ್ತೂರು ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಪುತ್ತೂರು ನಗರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ–ಎ**

1. ಪುತ್ತೂರು ಪಟ್ಟಣ

2. ಗ್ರಾಮಗಳು :–
1. ಕಮ್ಮಿಂಜಿ ಗ್ರಾಮದ ಸರಹದ್ದು(ಗ್ರಾಮ ಸಂ.46)
2. ಬಲ್ನಾಡು ಗ್ರಾಮದ ಸರಹದ್ದು(ಗ್ರಾಮ ಸಂ.48)ಮತ್ತು ಅರ್ಯಾಪು ಗ್ರಾಮದ ಸರಹದ್ದು(ಗ್ರಾಮ ಸಂ.49)
3. ಪಡ್ನೂರು ಗ್ರಾಮದ ಸರಹದ್ದು(ಗ್ರಾಮ ಸಂ.37) ಮತ್ತು ಕಬಕ ಗ್ರಾಮದ ಸರಹದ್ದು(ಗ್ರಾಮ ಸಂ.38)
4. ಬನ್ನೂರು ಗ್ರಾಮದ ಸರಹದ್ದು(ಗ್ರಾಮ ಸಂ.40) ಮತ್ತು ಚಿಕ್ಕಮಡ್ನೂರು ಗ್ರಾಮದ ಸರಹದ್ದು(ಗ್ರಾಮ ಸಂ.43)

**ಅನುಸೂಚಿ–ಬಿ**

**37** .ಪಡ್ನೂರು ಗ್ರಾಮ :– ಸಂಖ್ಯೆ 51, 52, 53, 54, 55, 56, 57, 58, 59, 60, 61, 62, 63, 64, 65, 66, 67, 68, 69, 70, 71, 72, 151, 174.

**40** .ಬನ್ನೂರು ಗ್ರಾಮ:– ಸಂಖ್ಯೆ. 12, 31, 32, 33, 39, 46, 47, 48, 49, 50, 51, 52, 53, 54, 55, 57, 58, 59, 60, 61, 62, 63, 64, 65, 66, 67, 68, 69, 70, 71, 72, 73, 74, 75, 76, 77, 78, 80, 86, 87, 88, 89, 90, 91, 92, 99, 100, 104, 105, 107, 108, 110, 111, 112, 113, 115, 117, 119, 121, 129, 130, 141 and 143.

**43** ಚಿಕ್ಕಮಡ್ನೂರು ಗ್ರಾಮ :– ಸಂಖ್ಯೆ.33, 34, 36, 37, 45, 46, 47, 48, 50, 54, 55, 56, 57, 58, 59, 60, 61, 62, 98, 99, 100, 101, 102, 103, 105, 106, 107, 109, 110, 111, 113, 114, 115, 116, 117, 118, 119, 120, 121, 122, 123, 124, 125, 126, 127, 128, 130, 131, 132, 133, 134, 136, 137, 138, 139, 141, 142, 143, 144, 145, 146, 147, 148, 149, 150, 151, 152, 153, 154, 155, 156, 159, 161, 169, 171, 172, 185, 186, 190.

**46** ಕಮ್ಮಿಂಜಿ ಗ್ರಾಮ:– ಸಂಖ್ಯೆ 1, 2, 3, 4, 5, 6, 7, 10, 18, 26, 30, 52, 53, 54, 55, 56, 57, 58, 62, 63, 64, 65, 66, 67, 68, 69, 70, 71, 72, 73, 74, 75, 76, 77, 78, 79, 80, 81, 82, 83, 84, 85, 86, 87, 88, 92, 94, 95, 97, 98, 99, 100, 101, 102, 103, 104, 105, 106, 108, 110, 111, 112, 113, 114, 115, 116, 117, 119, 120, 121, 122, 123, 124, 125, 126, 127, 128, 129, 130, 131, 132, 133, 134, 135, 136, 137, 138, 139, 140, 141, 142, 143, 144, 145, 149, 150, 151, 152, 154, 161, 165, 166, 167, 170, 176, 179, 181, 185, 196, 197, 199, 200, 201, 202, 209, 211, 212, 213, 214, 215, 216, 217, 218, 219, 220, 224, 225, 226, 227, 228, 229, 230, 231, 232, 233, 234, 235, 237, 239, 241, 243, 249, 250, 251, 252, 253, 254, 255, 261, 263, 264, 266, 272, 274, 280, 284, 285.

**49** ಅರ್ಯಾಪು ಗ್ರಾಮ:– ಸಂಖ್ಯೆ 2, 3, 8, 11, 12, 13, 14, 15, 16, 20, 36, 188, 190, 192, 197, 198, 199, 200, 201, 202, 203, 204, 205, 206, 207, 209, 210, 211, 212, 213, 214, 215, 216, 217, 223, 225, 234, 238, 239, 241, 243, 247, 248, 252, 253, 258, 259, 278, 284, 286, 325, 336, 340, 342, 351, 352, 356, 357, 360, 365, 366, 367, 368, 370, 372, 374, 375, 378, 383, 387, 388, 390, 393, 394, 397, 398, 399, 400, 403, 409, 410, 414, 416, 429.

**48** .ಬಲ್ನಾಡು ಗ್ರಾಮ :– ಸಂಖ್ಯೆ 1, 2, 3, 4, 5, 6, 7, 8, 9, 10, 11, 12, 13, 14, 15, 16, 17, 18, 19, 20, 21, 23, 24, 25, 26, 27, 28, 29, 30, 31, 32, 33, 34, 35, 36, 37, 38, 39, 40, 41, 42, 43, 44, 45, 46, 47, 48, 49, 58, 59, 60, 79, 80, 81, 82, 199, 230, 232, 233, 243, 248, 249, 251, 273, 274, 287, 289, 306, 309, 313, 315, 316, 321, 322, 328, 331, 337, 341, 351, 352, 364, 367, 368, 370, 371, 487, 498, 500, 501.

**38** ಕಬಕ ಗ್ರಾಮ :– ಸಂಖ್ಯೆ 163, 165, 166, 167, 170, 175, 176, 177, 178, 179, 180, 181, 182, 183, 184, 185, 186, 187, 188, 190, 191, 192, 193, 194, 195, 196, 197, 199, 200, 201, 202, 203, 204, 205, 206, 207, 208, 209, 210, 211, 212, 213, 214, 215, 216, 217, 218, 219, 220, 221, 222, 223, 224, 225, 226, 227, 228, 229, 230, 231, 232, 233, 234, 235, 236, 237, 238, 239, 240, 241, 242, 243, 244, 245, 246, 247, 248, 249, 254, 256, 260, 271, 284, 285, 286, 306.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೦, ೨೦೧೪ (ಭಾದ್ರಪದ ೨೯, ಶಕ ವರ್ಷ ೧೯೩೬) | ನಂ. ೫೮೭ |
| --- | --- | --- |
| Part– III | Bangalore, Saturday, September 20, 2014 (Bhadrapada 29, Shaka Varsha 1936) | No. 587 |


## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 214 ಎಂಎಲ್ಆರ್ 2013, ಬೆಂಗಳೂರು, ದಿನಾಂಕ 10.09.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 9 ನೇ ಮತ್ತು 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ–ಎ ಮತ್ತು ಅನುಸೂಚಿ–ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಸಿರಗುಪ್ಪ ಪುರಸಭೆ ಪ್ರದೇಶವನ್ನು 'ಸಿರಗುಪ್ಪ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಸಿರಗುಪ್ಪ ನಗರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ–ಎ**

1) ಸಿರುಗುಪ್ಪ ಪಟ್ಟಣ
2) ಗ್ರಾಮಗಳು:–

**ಅನುಸೂಚಿ–ಬಿ**

**ಪೂರ್ವ:–** ಸಿರುಗುಪ್ಪ ಗ್ರಾಮದ ಆಗ್ನೇಯ ದಿಕ್ಕಿನಿಂದ ಪಶ್ಚಿಮ 157 ರಿಂದ ಪ್ರಾರಂಭವಾಗಿ ಉತ್ತರ ದಿಕ್ಕಿಗೆ ಸರ್ವೆ ನಂ 155 ಜತೆ ಮುಂದುವರಿಯುತ್ತಾ ಪೂರ್ವಾಭಿಮುಖವಾಗಿ ಮುಂದುವರೆದು ಸ.ನಂ. 150ರ ಮುಖಾಂತರ ಹಾದು ಸಿರುಗುಪ್ಪ ಅರಳಿಗನೂರ್ ರಸ್ತೆ ಸ.ನಂ. 36ರ ಅಡ್ಡ ಹಾಯ್ದು ಅರಳಿಗನೂರ ಗ್ರಾಮದ ಗಡಿಗೆ ಹೊಂದಿಕೊಂಡಿರುವ ಸಿರುಗುಪ್ಪ ಗ್ರಾಮದ ಸರ್ವೆ ನಂ. 35, 34, 33, 29, 28 ಮುಂದುವರೆದು ಜಗ್ಗೂರು ಗಡಿ ಹೊಂದಿಕೊಂಡಂತೆ ಈಶಾನ್ಯ ದಿಕಿನಲ್ಲಿ ಸಿರುಗುಪ್ಪ ಗ್ರಾಮ ಸ.ನಂ. 27, 26, 23, 22, 17, 16, 15, 14, 13ರಲ್ಲಿ ಮುಂದುವರೆದಿದೆ. ಸ.ನಂ. 12ರಲ್ಲಿ ಸಿರುಗುಪ್ಪ ಅದೋನಿ ರಸ್ತೆ ಅಡ್ಡ ಹಾಯ್ದು ಹೋಗಿರುತ್ತದೆ. ಗಡಿ ರೇಖೆಯಲ್ಲಿ ಮುಂದುವರೆಯುತ್ತಾ ಜಾಣಕನೂರ ಗಡಿಗೆ ಹೊಂದಿಕೊಂಡಂತೆ ಸಿರುಗುಪ್ಪ ಸ.ನಂ. 1ರಲ್ಲಿ ಮುಂದುವರೆದಿದೆ. ಮತ್ತು ಸ.ನಂ. 2, 88, 89, 90, 91ರಲ್ಲಿ ಮುಂದುವರೆದು ಸ.ನಂ. 242 ರಲ್ಲಿ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ಈ ಎಲ್ಲಾ ಸರ್ವೆ ನಂ. ಗಳು ಸಿರುಗುಪ್ಪ ಗ್ರಾಮಕ್ಕೆ ಸೇರಿದ್ದು ಇಬ್ರಾಹಿಂಪುರ ಗ್ರಾಮದ ಗಡಿಗಳಾಗಿರುತ್ತವೆ. ಇದು ಸಿರುಗುಪ್ಪ ನಗರಸಭೆಯ ಪೂರ್ವ ಗಡಿಯಾಗಿರುತ್ತದೆ.

**ಉತ್ತರ:–** ಸಿರುಗುಪ್ಪ ಗ್ರಾಮದ ಈಶಾನ್ಯ ದಿಕ್ಕಿನಿಂದ ಪ್ರಾರಂಭವಾಗಿ ಪೂರ್ವಾಭಿಮುಖವಾಗಿ ಸ.ನಂ. 243, 245, 247, 248ರಲ್ಲಿ ಹಾಯ್ದು ಸ.ನಂ. 249ರಲ್ಲಿ ಬಾವಿಹಳ್ಳವನ್ನು ಅಡ್ಡ ಹಾಯ್ದು ಸಿರುಗುಪ್ಪ ಕುರುವಳ್ಳಿ ರಸ್ತೆಯನ್ನು ಸಂದಿಸಿ ಸರ್ವೆ ನಂ. 250ರಲ್ಲಿ ಸೇರುತ್ತದೆ. ರಸ್ತೆಯನ್ನು ಅಡ್ಡ ಹಾಯ್ದು ನಂತರ ಸ.ನಂ. 271, 272, 273, 274, 275, 276, 278, 279, 280, 283, 282ರಲ್ಲಿ ಪ್ರವೇಶಿಸಿ ಸರ್ವೆ ನಂ. 484, 485ರಲ್ಲಿ ಸಣ್ಣ ಹಳ್ಳದ ಜತೆ ಮುಂದುವರೆದು ಸಿರುಗುಪ್ಪ ಇಬ್ರಾಹಿಂಪುರ ರಸ್ತೆಯನ್ನು ಸ.ನಂ. 486ರಲ್ಲಿ ಅಡ್ಡ ಹಾಯ್ದು ಸಿರುಗುಪ್ಪ ಗ್ರಾಮದ ಉತ್ತರದ ಮೇರು ಪ್ರದೇಶದ ಸರ್ವೆ

ನಂ. 497ರಲ್ಲಿ ಅಡ್ಡನ್ನು ಪ್ರವೇಶಿಸಿರುತ್ತದೆ. ಅಲ್ಲಿಂದ ಮತ್ತೆ ಕೆಳಮುಖವಾಗಿ ಸ.ನಂ. 498, 500, 501, 506, 507, 508, 511, 513, 518, 514, 515, 517, 519, 520, 522, 1022, 1023ರಲ್ಲಿ ಹಾಯ್ದು ಹೋಗಿರುತ್ತದೆ. ಈ ಎಲ್ಲಾ ಸರ್ವೆ ನಂಬರ್‌ಗಳೂ ಸಿರುಗುಪ್ಪ ಗ್ರಾಮದ್ದಾಗಿದ್ದು ಇಬ್ರಾಹಿಂಪುರ ಗ್ರಾಮದ ಗಡಿ ಪ್ರದೇಶವಾಗಿರುತ್ತದೆ. ಅಲ್ಲಿಂದ ಮತ್ತೆ ಉತ್ತರಾಭಿಮುಖವಾಗಿ ಸ.ನಂ. 1024, 1025, 1033, 1037, 1036, 1038, 1042, 1052, 1053, 1054, 1064, 1065, 1076, 1077, 1079, 1080, 1082, 1089, 1090, 1091, 1098, 1103, 1104, 1105, 1106, 1107, 1135, 1148, 1139 ಜತೆಯಾಗಿ ಸಿರುಗುಪ್ಪ ಗ್ರಾಮದ ವಾಯುವ್ಯ ದಿಕ್ಕಿಗೆ ಮುಂದುವರೆದಿರುತ್ತದೆ. ಈ ಎಲ್ಲಾ ಸರ್ವೆ ನಂಬರುಗಳು ಸಿರುಗುಪ್ಪ ಗ್ರಾಮಕ್ಕೆ ಸೇರಿದ್ದು ದೇಶನೂರು ಗ್ರಾಮದ ಗಡಿಯಾಗಿರುತ್ತದೆ. ಇದು ಸಿರುಗುಪ್ಪ ನಗರಸಭೆಯ ಉತ್ತರ ಗಡಿಯಾಗಿರುತ್ತದೆ.

**ಪಶ್ಚಿಮ:–** ಸಿರುಗುಪ್ಪ ಗ್ರಾಮದ ನೈರುತ್ಯ ದಿಕ್ಕಿನ ಸರ್ವೆ ನಂ. 1137ರಿಂದ ಪ್ರಾರಂಭವಾಗಿ ತುಂಗಭದ್ರಾ ನದಿಯ ಸರಗು ಪ್ರದೇಶದ ಜೊತೆಯಾಗಿ ಪಶ್ಚಿಮಾಭಿಮುಖವಾಗಿ ಸ.ನಂ. 1187, 1188, 1189, 1529, 1530, 1531, 1537, 1539, 1547, 1548, 1555, 1556, 1563, 1564, 1567, 1570, 1571, 1647, 1648, 1649, 1650, 1652, 1653, 1657, 1658, 1659, 1663, 1662, 1664, 1679, 1680, 1682, 1683, 1800, 1780, 1731, 1782, 1784, 1785, 1786, 1788, 1789, 1790 ರಿಂದ 1794, 1796ರಲ್ಲಿ ಮುಂದುವರೆದು ಮತ್ತೆ ಕೆಳಮುಖವಾಗಿ ಮುಂದುವರೆದು ಜಳ ವಿಜಯನಗರ ಅಣೆಕಟ್ಟು ಪ್ರದೇಶದಲ್ಲಿ ನದಿಯ ಅಡ್ಡ ಹಾಯ್ದು ಸ.ನಂ. 1798ನ್ನು ಪ್ರವೇಶಿಸಿರುತ್ತದೆ. ಈ ಎಲ್ಲಾ ಸರ್ವೆ ನಂಬರುಗಳು ಸಿರುಗುಪ್ಪ ಗ್ರಾಮಕ್ಕೆ ಸೇರಿದ್ದು ತುಂಗಭದ್ರ ನದಿಯ ಸರಗು ಪ್ರದೇಶಕ್ಕೆ ಸೇರಿದ್ದು ಸರ್ವೆ ನಂ. 1797ಕ್ಕೆ ಸೇರಿದಂತೆ ಭಾಗಶಃ ಕೆಂಚನಗುಡ್ಡ ಗ್ರಾಮದ ಗಡಿಯಾಗಿರುತ್ತದೆ. ಇದು ಸಿರುಗುಪ್ಪ ನಗರಸಭೆಯ ಪಶ್ಚಿಮ ಗಡಿಯಾಗಿರುತ್ತದೆ.

**ದಕ್ಷಿಣ:–** ನೈರುತ್ಯ ದಿಕ್ಕಿನಿಂದ ಪ್ರಾರಂಭವಾಗಿರುತ್ತದೆ. ಸಿರುಗುಪ್ಪ ಗ್ರಾಮಕ್ಕೆ ಸೇರಿದ ಸರ್ವೆ ನಂ. 1798ರ ಕೆಳಗಿನ ಪ್ರದೇಶವಾದ ಸರ್ವೆ ನಂ. 1799 ಆಗಿದ್ದು ತುಂಗಭದ್ರ ನದಿಯ ಭಾಗವಾಗರುತ್ತದೆ. ಉತ್ತರಾಭಿಮುಖವಾಗಿ ತುಂಗಭದ್ರ ನದಿಗೆ ಹೊಂದಿಕೊಂಡಂತಿರುವ ಗಡಿ ರೇಖೆಯಲ್ಲಿ ಮುಂದುವರೆದು ಸರ್ವೆ ನಂ. 1795, 1774, 1775, 1773, 1772, 1761, 1760, 1759, 1757, 1707, 1708, 1709, 1706, 1705, 1704, 1703, 1702, 1696, 1695, 1634, 1635, 1639, 1621, 1633, 1623, 1632, 1625, 1626, 1631, 1630, 1400, 1399, 1398, 1397, 1395, 1396, 1394, 1393, 1392, 1388, 1384, 1377, 1375, 1374, 1373, 1359, 1358, 1355, 1357, 1356, 1351, 1352, 1353, 1354, 1317, 1315, ಪ್ರವೇಶಿಸಿ ಪ್ರಧಾನ ಕಾಲುವೆ ಜತೆಯಾಗಿ ಮುಂದುವರೆದಿರುತ್ತದೆ. ಈ ಪ್ರಧಾನ ಕಾಲುವೆಯನ್ನು ಅಡ್ಡ ಹಾಯ್ದು ನಂತರ ಸರ್ವೆ ನಂ. 793ರಲ್ಲಿ ಪ್ರವೇಶಿಸಿ ಸಿರುಗುಪ್ಪ ಕೆಂಚನಗುಡ್ಡ ರಸ್ತೆಯನ್ನು ಸ.ನಂ. 792ರಲ್ಲಿ ಅಡ್ಡ ಹಾಯ್ದು ಮುಂದೆ ಕೆಳಮುಖವಾಗಿ ಸ.ನಂ. 791 ಮತ್ತು 790ರ ಜೊತೆ ಮುಂದುವರೆಯುತ್ತದೆ. ಈ ಎಲ್ಲಾ ಸ.ನಂ.ಗಳು ಸಿರುಗುಪ್ಪ ಗ್ರಾಮಕ್ಕೆ ಸೇರಿದ್ದು, ಕೆಂಚನಗುಡ್ಡ ಗ್ರಾಮದ ಗಡಿಯಾಗಿರುತ್ತದೆ. ಇಲ್ಲಿಂದ ಮತ್ತೆ ಸರ್ವೆ ನಂ. 789 ಮತ್ತು 788ನ್ನು ಪ್ರವೇಶಿಸಿ ಸರ್ವೆ ನಂ. 781ರಲ್ಲಿ ಇರುವ ಸಿರುಗುಪ್ಪ ದೇವಲಾಪುರ ಗ್ರಾಮದ ರಸ್ತೆಯನ್ನು ಅಡ್ಡ ಹಾಯುತ್ತದೆ. ಗಡಿ ರೇಖೆಯ ಜತೆ ಮುಂದುವರೆದು ಸರ್ವೆ ನಂ. 403, 402, 401, 400ರಲ್ಲಿ ಹಾಯುತ್ತದೆ. ಮುಂದೆ ನೈರುತ್ಯ ದಿಕ್ಕಿನಲ್ಲಿ ಸಿರುಗುಪ್ಪ ಗ್ರಾಮದ ಸೀಮಾರೇಖೆಯನ್ನು ದಾಟಿ ದೇವಲಾಪುರ ಗ್ರಾಮದ ಸರ್ವೆ ನಂ. 29, 28, 39, 40ರಲ್ಲಿ ಪ್ರವೇಶಿಸಿರುತ್ತದೆ. ಮತ್ತೆ ಪೂರ್ವಾಭಿಮುಖವಾಗಿ ಮುಂದುವರೆದು ಸ.ನಂ. 36ನ್ನು ಸ್ಪರ್ಶಿಸಿ ಸ.ನಂ. 36ರಲ್ಲಿ ಇಡೀ ಕಾಲುವೆಯನ್ನು ಅಡ್ಡ ಹಾಯುತ್ತದೆ. ಮುಂದೆ ಕೆಳಮುಖವಾಗಿ ಮತ್ತೆ ಮುಂದುವರೆದು ದೇವಲಾಪುರ ಗ್ರಾಮದ ಸರ್ವೆ ನಂ. 104ನ್ನು ಪ್ರವೇಶಿಸಿ ಮತ್ತೆ ಪೂರ್ವಾಭಿಮುಖವಾಗಿ ಸರ್ವೆ ನಂ. 106ರ ಜತೆ ತಿರುವು ಪಡೆದಂತಿರುತ್ತದೆ. ಮತ್ತೆ ಪೂರ್ವಾಭಿಮುಖವಾಗಿ ಮುಂದುವರೆದು ಇದೇ ಸ.ನಂಬರ್‌ನ್ಲಲಿ ಬರುವ ಬಳ್ಳಾರಿ ಸಿರುಗುಪ್ಪ ಪ್ರಧಾನ ರಸ್ತೆ ಅಡ್ಡ ಹಾಯ್ದು ಸರ್ವೆ ನಂ. 6ನ್ನು ಸೇರುತ್ತದೆ. ಇಲ್ಲಿಂದ ಉತ್ತರಾಭಿಮುಖವಾಗಿ ಸ.ನಂ. 6 ಮತ್ತು 5ರ ಜೊತೆ ಹೊರಟು ಸ.ನಂ. 5 ಮತ್ತು 10ಕ್ಕೆ ಗಡಿಯಂತಿರುವ ಹಾಲಿ ರಸ್ತೆಯನ್ನು ಅಡ್ಡ ಹಾಯುತ್ತದೆ. ಪೂರ್ವಾಭಿಮುಖವಾಗಿ ಮುಂದುವರೆದು ಸ.ನಂ. 11ರಲ್ಲಿ ದಕ್ಷಿಣದ ಕೊನೆಯಲ್ಲಿ ಕೊನೆಗೊಳ್ಳುತ್ತದೆ. ಅಲ್ಲಿಂದ ಸ.ನಂ. 11ರಲ್ಲಿ ಉತ್ತರಾಭಿಮುಖವಾಗಿ ಮುಂದುವರೆದು ಸ.ನಂ. 386ರಲ್ಲಿರುವ ಸಿರುಗುಪ್ಪ ಗ್ರಾಮದ ಗಡಿರೇಖೆಯಲ್ಲಿ ತಲುಪುತ್ತದೆ. ಈ ಎಲ್ಲಾ ಸರ್ವೆ ನಂಬರುಗಳು ದೇವಲಾಪುರಕ್ಕೆ ಸೇರಿದ್ದು ದೇವಲಾಪುರದ ಗಡಿಯಾಗಿರುತ್ತದೆ. ಇದು ಸಿರುಗುಪ್ಪ ನಗರಸಭೆಯ ವ್ಯಾಪ್ತಿಯ ಗಡಿ ಪ್ರದೇಶವಾಗಿರುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ– III | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೦, ೨೦೧೪ (ಭಾದ್ರಪದ ೨೯, ಶಕ ವರ್ಷ ೧೯೩೬) | ನಂ. ೫೮೮ |
|---|---|---|
| Part– III | Bangalore, Saturday, September 20, 2014 (Bhadrapada 29, Shaka Varsha 1936) | No. 588 |


## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 229 ಎಂಎಲ್‌ಆರ್ 2013, ಬೆಂಗಳೂರು, ದಿನಾಂಕ 10.09.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 9 ನೇ ಮತ್ತು 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;

3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;

4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ–ಎ ಮತ್ತು ಅನುಸೂಚಿ–ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಉಲ್ಲಾಳ ಪುರಸಭೆ ಪ್ರದೇಶವನ್ನು 'ಉಲ್ಲಾಳ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಉಲ್ಲಾಳ ನಗರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ–ಎ**

1. ಉಳ್ಳಾಲ
2. ಪೆರ್ಮನ್ನೂರು

} ಉಳ್ಳಾಲ ಪಟ್ಟಣ ಪಂಚಾಯತ್ ಪ್ರದೇಶ

**ಅನುಸೂಚಿ–ಬಿ**

| | |
|---|---|
| **ಉತ್ತರ:** | ನೇತ್ರಾವತಿ ನದಿ |
| **ದಕ್ಷಿಣ:** | ಸೋಮೇಶ್ವರ ಕಂದಾಯ ಗ್ರಾಮ |
| **ಪೂರ್ವ:** | ಮುನ್ನೂರು ಕಂದಾಯ ಗ್ರಾಮ |
| **ಪಶ್ಚಿಮ:** | ಅರಬೀ ಸಮುದ್ರ |

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ– III | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೦, ೨೦೧೪ (ಭಾದ್ರಪದ ೨೯, ಶಕ ವರ್ಷ ೧೯೩೬) | ನಂ. ೫೮೯ |
|---|---|---|
| Part– III | Bangalore, Saturday, September 20, 2014 (Bhadrapada 29, Shaka Varsha 1936) | No. 589 |


## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ನಅಇ 210 ಎಂಎಲ್‌ಆರ್ 2013, ಬೆಂಗಳೂರು, ದಿನಾಂಕ 10.09.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 9 ನೇ ಮತ್ತು 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;

2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;

3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;

4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ–ಎ ಮತ್ತು ಅನುಸೂಚಿ–ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ನಂಜನಗೂಡು ಪುರಸಭೆ ಪ್ರದೇಶವನ್ನು 'ನಂಜನಗೂಡು ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ನಂಜನಗೂಡು ನಗರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅನುಸೂಚಿ–ಎ**

(1) ನಂಜನಗೂಡು ಪಟ್ಟಣ

(2) ದೇವೀರಮ್ಮನ ಹಳ್ಳಿ

(3) ಕಲ್ಲಹಳ್ಳಿ

**ಅನುಸೂಚಿ–ಬಿ**

**ಉತ್ತರಕ್ಕೆ:–** ನಂಜನಗೂಡು ಗ್ರಾಮದ ಸರ್ವೆ ನಂ. 48ರಿಂದ ಗಡಿ ರೇಖೆಯು ಪ್ರಾರಂಭಗೊಂಡು ಗುಂಡ್ಲು ನದಿಯನ್ನು ದಾಟಿ, ಪಶ್ಚಿಮಾಭಿಮುಖವಾಗಿ ಕಪಿಲಾ ನದಿಯ ಬಲ ದಂಡೆಯ ಮೂಲಕ ಸರ್ವೆ ನಂ. 47, 36, 1381, 11, 1370, 10, 9, 4, 5, 6, 7 ಮತ್ತು ಸರ್ವೆ ನಂ. 8ರ ಉತ್ತರದ ಗಡಿಯ ಮೂಲಕ ಸಾಗಿ ಕಪಿಲಾ ನದಿಯ ಬಲ ದಂಡೆಯ ತೀರದಲ್ಲಿ ಮುಂದುವರೆಯುತ್ತ ಸರ್ವೆ ನಂ. 348, 15, 16, 17, 18ರ ಉತ್ತರದ ಗಡಿಯನ್ನು ತಲುಪಿ ಅಲ್ಲಿಂದ ಪಶ್ಚಿಮಕ್ಕೆ ತಿರುಗಿ ಸರ್ವೆ ನಂ. 19ರ ಉತ್ತರದ ಗಡಿಯಲ್ಲಿ ಸಾಗಿ ರೈಲ್ವೆ ಹಳಿ ಮತ್ತು ಮೈಸೂರು–ಊಟಿ ರಸ್ತೆಯನ್ನು ದಾಟಿ ಅಲ್ಲಿಂದ ಸರ್ವೆ ನಂ. 144, 145, 146, 147, 153ರ ಉತ್ತರದ ಗಡಿಯಲ್ಲಿ ಮುಂದುವರೆದು ಸರ್ವೆ ನಂ. 148 ಮತ್ತು 149ರ ಪೂರ್ವದ ಗಡಿಯಲ್ಲಿ ಉತ್ತರಾಭಿಮುಖವಾಗಿ ಸಾಗಿ ಕಲ್ಲಹಳ್ಳಿ ಗ್ರಾಮದ ಸರ್ವೆ ನಂ. 159, 158, 153, 110, 111, 85, 84, 81ರ ಪೂರ್ವದ ಗಡಿಯ ಮೂಲಕ ಮುಂದುವರೆದು ಸರ್ವೆ ನಂ. 81ರ ಈಶಾನ್ಯ ಮೂಲೆಯಿಂದ ಪಶ್ಚಿಮಕ್ಕೆ ತಿರುಗಿ ಸರ್ವೆ ನಂ. 82, 90, 91, 68 ಮತ್ತು 58ರ ಉತ್ತರದ ಗಡಿಯಲ್ಲಿ ಮುಂದುವರೆದು ಕಲ್ಲಹಳ್ಳಿ ಗ್ರಾಮದ ಸರ್ವೆ ನಂ. 58ರ ವಾಯುವ್ಯ ಮೂಲೆಯನ್ನು ತಲುಪುತ್ತದೆ.

**ಪಶ್ಚಿಮಕ್ಕೆ:–** ಗಡಿ ರೇಖೆಯು ಕಲ್ಲಹಳ್ಳಿ ಗ್ರಾಮದ ಸರ್ವೆ ನಂ. 58ರ ವಾಯುವ್ಯ ಮೂಲೆಯಿಂದ ದಕ್ಷಿಣಾಭಿಮುಖವಾಗಿ ಹೊರಟು ಕಲ್ಲಹಳ್ಳಿ ಗ್ರಾಮದ ಸರ್ವೆ ನಂ. 61, 126, 127, 139, 141, 198, 223, 199, 162, 229, 179 ಮತ್ತು ಸರ್ವೆ ನಂ. 177ರ ಪಶ್ಚಿಮದ ಗಡಿಯ ಮೂಲಕ ಸಾಗಿ ಸರ್ವೆ ನಂ. 177ರ ನೈರುತ್ಯ ಮೂಲೆಯನ್ನು ಸೇರಿ ನಂತರ ಪೂರ್ವಾಭಿಮುಖವಾಗಿ ಹೊರಟು ಕಲ್ಲಹಳ್ಳಿ ಗ್ರಾಮದ ಸರ್ವೆ ನಂ. 176, 175, 174ರ ದಕ್ಷಿಣದ ಗಡಿಯಲ್ಲಿ ಮುಂದುವರೆದು ಅಲ್ಲಿಂದ ದಕ್ಷಿಣಾಭಿಮುಖವಾಗಿ ಹೊರಟು ಕೋನೆಹುಂಡಿ ಗ್ರಾಮದ ಸರ್ವೆ ನಂ. 180, 196, 197, 198, 199 ಹಾಗೂ ಸರ್ವೆ ನಂ. 200ರ ಪಶ್ಚಿಮದ ಗಡಿಯಲ್ಲಿ ಸಾಗಿ ಸರ್ವೆ ನಂ. 200ರ ನೈರುತ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಪೂರ್ವಾಭಿಮುಖವಾಗಿ ತಿರುಗಿ ಹುಲ್ಲಹಳ್ಳಿ ನಾಲೆಯ ಎಡದಂಡೆಯ ಮೇಲೆ ಹೊರಟು ಸ.ನಂ. 291, 190, 189 ಮತ್ತು ಸರ್ವೆ ನಂ. 188ರ ದಕ್ಷಿಣ ಗಡಿಯಲ್ಲಿ ಸಾಗಿ ಸರ್ವೆ ನಂ. 188ರ ಆಗ್ನೇಯ ಮೂಲೆಯನ್ನು ಸೇರುತ್ತದೆ. ನಂತರ ದಕ್ಷಿಣಾಭಿಮೂಖವಾಗಿ ಹೊರಟು ಹುಲ್ಲಹಳ್ಳಿ ನಾಲೆಯನ್ನು ದಾಟಿ ನಂಜನಗೂಡು ಸರ್ವೆ ನಂ. 268ರ ಪಶ್ಚಿಮದ ಗಡಿ ಮೂಲಕ ಸಾಗಿ ಮರ ರಸ್ತೆಯನ್ನು ದಾಟಿ ಸರ್ವೆ ನಂ. 280ರ 281, 282, 283, 284, 285, 289, 290, 291 ಹಾಗೂ ಸರ್ವೆ ನಂ. 292ರ ಪಶ್ಚಿಮದ ಗಡಿ ಮೂಲಕ ಮುಂದುವರೆದು ಅಲ್ಲಿಂದ ದೇವೀರಮ್ಮನ ಹಳ್ಳಿಯ ಸರ್ವೆ ನಂ. 41, 42, 39, 31, 29, 28, 218 ಮತ್ತು ಸ.ನಂ. 217ರ ಪಶ್ಚಿಮದ ಗಡಿಯಲ್ಲಿ ಸಾಗಿ ಸ.ನಂ. 217ರ ನೈರುತ್ಯ ಮೂಲೆಯನ್ನು ತಲುಪುತ್ತದೆ.

**ದಕ್ಷಿಣಕ್ಕೆ:–** ಗಡಿ ರೇಖೆಯು ದೇವೀರಮ್ಮನ ಹಳ್ಳಿ ಸರ್ವೆ ನಂ. 217ರ ನೈರುತ್ಯ ಅಂಚಿನಿಂದ ಪೂರ್ವಾಭಿಮುಖವಾಗಿ ಹೊರಟು ಸರ್ವೆ ನಂ. 218 ಮತ್ತು 227ರ ದಕ್ಷಿಣದ ಗಡಿಯಲ್ಲಿ ಸಾಗಿ ಅಲ್ಲಿಂದ ದಕ್ಷಿಣಾಭಿಮುಖವಾಗಿ ತಿರುಗಿ ಸರ್ವೆ ನಂ. 221ರ ನೈರುತ್ಯ ಮೂಲೆಯನ್ನು ತಲುಪಿ ಪೂರ್ವಾಭಿಮುಖವಾಗಿ ಹೊರಟು ಸರ್ವೆ ನಂ. 223 ಮತ್ತು 224ರ ಜಮೀನುಗಳನ್ನು ಸೀಳಿಕೊಂಡು ಸರ್ವೆ ನಂ. 226, 227 ಮತ್ತು 17, 16ರ ದಕ್ಷಿಣ ಗಡಿಯಲ್ಲಿ ಸಾಗಿ ಮುಂದೆ ದಕ್ಷಿಣಾಭಿಮುಖವಾಗಿ ತಿರುಗಿ ಸರ್ವೆ ನಂ. 5ರ ಪಶ್ಚಿಮದ ಗಡಿಯ ಮೂಲಕ ಸಾಗಿ ಸರ್ವೆ ನಂ. 68ರ ನೈರುತ್ಯ ಮೂಲೆಯನ್ನು ತಲುಪಿ ಅಲ್ಲಿಂದ ಪೂರ್ವಾಭಿಮುಖವಾಗಿ ತಿರುಗಿ ಸರ್ವೆ ನಂ. 77 ಸೇರಿ ನಂತರ ಗುಂಡ್ಲುಪೇಟೆ ರಸ್ತೆಯನ್ನು ದಾಟಿ ಸರ್ವೆ ನಂ. 76, 74, 73, 72, 66 ಮತ್ತು ಸರ್ವೆ ನಂ. 65ರ ದಕ್ಷಿಣದ ಗಡಿಯಲ್ಲಿ ಮುಂದುವರೆದು ಸರ್ವೆ ನಂ. 65ರ ಪೂರ್ವದ ಗಡಿಯಲ್ಲಿ ಉತ್ತರಕ್ಕೆ ತಿರುಗಿ ಅದರ ವಾಯುವ್ಯ ಮೂಲೆಯಿಂದ ಪೂರ್ವಕ್ಕೆ ತಿರುಗಿ

ಕಸಬಾ ಸರ್ವೆ ನಂ. 1232 ರ ದಕ್ಷಿಣದ ಗಡಿಯ ಮೂಲಕ ಸಾಗಿ, ಹುಲ್ಲಹಳ್ಳಿ ನಾಲೆಯನ್ನು ದಾಟಿ ನಾಲೆಯ ಎಡ ಭಾಗದ ಅಂಚಿನಲ್ಲಿ ಮುಂದುವರೆದು ಸರ್ವೆ ನಂ. 1230, 1231 ಮತ್ತು ಸರ್ವೆ ನಂ. 1208ರ ದಕ್ಷಿಣದ ಗಡಿಯ ಮೂಲಕ ಸಾಗಿ ಗುಂಡ್ಲು ನದಿಯ ಎಡಭಾಗದ ದಡವನ್ನು ಸೇರುತ್ತದೆ.

**ಪೂರ್ವಕ್ಕೆ:–** ಗಡಿ ರೇಖೆಯು ಕಸಬಾ ಸರ್ವೆ ನಂ. 1208ರ ಅಂಚಿನಿಂದ ಪ್ರಾರಂಭಗೊಂಡು ಗುಂಡ್ಲು ನದಿಯನ್ನು ದಾಟಿ ಹಾಗೂ ಹುಲ್ಲಹಳ್ಳಿ ನಾಲೆಯ ಎಡ ದಂಡೆಯ ಅಂಚಿನಿಂದ ಸರ್ವೆ ನಂ. 1164, 1162, 1161, 1156, 1155, 993, 994, 965, 964 ಮತ್ತು ಸರ್ವೆ ನಂ. 1106ರ ಪೂರ್ವದ ಗಡಿ ಮೂಲಕ ಸಾಗಿ ರೈಲ್ವೆಯ ಹಳಿಯನ್ನು ದಾಟಿ ಸರ್ವೆ ನಂ. 1021, 1022, 1023, 1025, 1026 ಮತ್ತು 1377ರ ದಕ್ಷಿಣದ ಗಡಿಯ ಮೂಲಕ ಮುಂದುವರೆದು ಸರ್ವೆ ನಂ. 1377ರ ಆಗ್ನೇಯ ಮೂಲೆಯಿಂದ ಉತ್ತರಾಭಿಮುಖವಾಗಿ ತಿರುಗಿ ಅಲ್ಲಿಂದ ಮುಂದುವರೆದು ಸರ್ವೆ ನಂ. 1358, 1038, 1039, 1040, 1041, 1042, 1043ನ್ನು ತಲುಪಿ ನಂತರ ಚಾಮರಾಜನಗರ ರಸ್ತೆಯನ್ನು ದಾಟಿ ಸರ್ವೆ ನಂ. 38, 39, 80, 81, 55, 52ರ ಪೂರ್ವದ ಗಡಿ ಮೂಲಕ ಸಾಗಿ ಸರ್ವೆ ನಂ. 52ರ ಈಶಾನ್ಯ ಮೂಲೆಯಿಂದ ಪಶ್ಚಿಮಕ್ಕೆ ತಿರುಗಿ ಸರ್ವೆ ನಂ. 1371, 50 ಮತ್ತು 49ರ ಉತ್ತರದ ಗಡಿಯಲ್ಲಿ ಮುಂದುವರೆದು ನಂಜನಗೂಡು ಕಸಬಾ ಸ.ನಂ.48ರ ಈಶಾನ್ಯ ಮೂಲೆಯನ್ನು ಅಂದರೆ ಉತ್ತರದ ಗಡಿ ರೇಖೆಯು ಆರಂಭಗೊಂಡ ಸ್ಥಳವನ್ನೇ ಸೇರುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ


# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೦, ೨೦೧೪ (ಭಾದ್ರಪದ ೨೯, ಶಕ ವರ್ಷ ೧೯೩೬) | ನಂ. ೫೯೦ |
|---|---|---|
| **Part– III** | **Bangalore, Saturday, September 20, 2014 (Bhadrapada 29, Shaka Varsha 1936)** | **No. 590** |


## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 211 ಎಂಎಲ್‌ಆರ್ 2013, ಬೆಂಗಳೂರು, ದಿನಾಂಕ 10.09.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 9 ನೇ ಮತ್ತು 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ ಎ ಮತ್ತು ಅನುಸೂಚಿ ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಕನಕಪುರ ಪುರಸಭೆ ಪ್ರದೇಶವನ್ನು 'ಕನಕಪುರ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಕನಕಪುರ ನಗರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

### ಅನುಸೂಚಿ–ಎ

(1) ಕನಕಪುರ ಪಟ್ಟಣ
(2) ಗ್ರಾಮಗಳು
(1) ಅಂಬೇಡ್ಕರ್ ನಗರ
(2) ಹೌಸಿಂಗ್ ಬೋರ್ಡ್ ಕ್ವಾಟರ್ಸ್
(3) ಮಾಧವ ನಗರ
(4) ಕೆ.ಇ.ಬಿ.ಕಾಲೋನಿ
(5) ದೇಗುಲ ಮಠ
(6) ಮಹಾರಾಜಕಟ್ಟೆ ಗ್ರಾಮ
(7) ಕೆಳಕಂಡ ಸರ್ವೆ ನಂಬರುಗಳು

